RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮೇ ೨, ೨೦೧೩ (ವೈಶಾಖ ೧೨, ಶಕ ವರ್ಷ ೧೯೩೫)<br>Bangalore, Thursday, May 2, 2013 (Vaishakha 12, Shaka Varsha 1935) | ಸಂಚಿಕೆ ೧೮<br>Issue 18 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು –ಇವರ ನ್ಯಾಯಾಲಯ

**ಅಧಿಸೂಚನೆ**

**ಸಂಖ್ಯೆ :ಡಬ್ಲ್ಯೂಸಿಎ/ಸಿಆರ್–6/2013ಎಫ್ ದಿನಾಂಕ: 30–03–2013.**

**ಅರ್ಜಿದಾರರು:**

1. ಶ್ರೀಮತಿ. ಚಂಚಲ ಶ್ರೀ. ದಿ. ಲೋಕನಾಥ ಶೆಟ್ಟಿಗಾರ್ ರವ ಮಡದಿ ವಾಸ: ಶರಾವ್ ಹೌಸ್ ಕೊಡದವು ಹೌಸ್ ಬಂಟ್ವಾಳ ತಾಲೂಕು ದ.ಕ.ಜಿಲ್ಲೆ.
2. ಆಖಿಲ್,ದಿ. ಲೋಕನಾಥ್ ಶೆಟ್ಟಿಗಾರ್ ರವರ ಮಗ
3. ಶ್ರೀಮತಿ. ಗಿರಿಜ ಬಾಬು ಶೆಟ್ಟಿಗಾರ್ ರವರ ಮಡದಿ ವಾಸ: ರುಂಬೋಡಿ ಹೌಸ್ ಬರುವ, ಕೊಣಾಜೆ ಅಂಚೆ ಮಂಗಳೂರು.

**ವಿರುದ್ಧ**

**ಪ್ರತಿವಾದಿಗಳು**

1. ಡೈರೆಕ್ಟರ್ ಫಾದರ್ ಮುಲ್ಲರ್ ಚಾರಿಟೇಬಲ್ ಇನ್ಸ್ಟಿಟ್ಯುಶನ್ ಕಂಕನಾಡಿ, ಮಂಗಳೂರು–575002, ದ.ಕ.
2. ಪ್ರೊಪ್ರೈಟರ್ ಶ್ರೀ. ರಾಜೇಶ್ ಡಿ ಮೈಸ್ತ್ರಿ, ಮೈಸ್ತ್ರಿಸ್ ಕನ್ಸ್ಟ್ರಕ್ಷನ್ಸ್ ಲಿ, ಜಯರಾಮ್ ಸೆಂಟರ್, ಮಲ್ಲಿಕಟ್ಟೆ, ಮಂಗಳೂರು– 575002, ದ.ಕ.
3. ಶ್ರೀ. ದಾಮೋದರ ಶೆಟ್ಟಿಗಾರ್ ಅಬ್ಬು ಶೆಟ್ಟಿಗಾರ್ ರವರ ಮಗ ವಾಸ: ದುರ್ಗ ನಿಲಯ, ಯಶವಂತಿಪುರ, ಕೊಣಾಜೆ, ಮಂಗಳೂರು, ದ.ಕ.
4. ದಿ. ಬ್ರಾಂಚ್ ಮೆನೇಜರ್ ಮೆ: ದಿ ನ್ಯೂ ಇಂಡಿಯಾ ಅಶುರೆನ್ಸ್ ಕಂ ಲಿ, ಸಿಟಿ ಬ್ರಾಂಚ್–11 ರಾಮಭವನ್ ಕಾಂಪ್ಲೆಕ್ಸ್ 3ನೇ ಮಹಡಿ, ನಿಯರ್ ನವಭಾರತ್ ಸರ್ಕಲ್, ಮಂಗಳೂರು–575003,ದ.ಕ.

ಅರ್ಜಿದಾರರಾದ ಶ್ರೀಮತಿ. ಚಂಚಲ ಇವರು ತಮ್ಮ ಗಂಡನಾದ ದಿವಂಗತ ಶ್ರೀ ಲೋಕನಾಥ ಶೆಟ್ಟಿಗಾರ್ ರವರು ಪ್ರತಿವಾದಿಯವರಾದ ಕ್ರಮ ಸಂಖ್ಯೆ: 1, 2 ಮತ್ತು 3 ರವರ ಗುತ್ತಿಗೆದಾರರಲ್ಲಿ ಕಟ್ಟಡದ ಸೆಂಟರಿಂಗ್ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದ ದಿ: **09–02–2012 ರಂದು** ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟನೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ

**ಮಹೇಶ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–1, ಮಂಗಳೂರು

**P.R. 249**
**SC - 5**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 25 ಎಲ್‌ಆರ್‌ಎಂ 2011, ಬೆಂಗಳೂರು, ದಿನಾಂಕ 14ನೇ ಮಾರ್ಚ್, 2013**

ಜೆ.ಎಸ್.ಎಸ್.ಮಹಾವಿದ್ಯಾಪೀಠ, ಮೈಸೂರು ಇವರಿಗೆ ಚಾಮರಾಜನಗರ ಜಿಲ್ಲೆಯ ಚಾಮರಾಜನಗರ ತಾಲ್ಲೂಕು ಕಸಬಾ ಹೋಬಳಿ, ಉತ್ತುವಳ್ಳಿ ಗ್ರಾಮದ ಸ.ನಂ.124/1.2 ರಲ್ಲಿ 48 ಎಕರೆ 19 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 94 ಎಲ್‌ಆರ್‌ಎ 2008, ದಿನಾಂಕ: 24–02–2009 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 109 ರಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ: 23–02–2011 ರಿಂದ 3 ವರ್ಷಗಳ ಅವಧಿಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ.ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ ಸುಧಾರಣೆ).

P.R. 213

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 202 ಎಲ್‌ಆರ್‌ಎಂ 2012, ಬೆಂಗಳೂರು, ದಿನಾಂಕ 14ನೇ ಮಾರ್ಚ್, 2013**

ಭರತೇಶ ಎಜುಕೇಷನ್ ಟ್ರಸ್ಟ್ ಬೆಳಗಾವಿ ಇವರಿಗೆ ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕು/ ಬಸವನ ಕುಡಚಿ ಗ್ರಾಮದ ರಿ.ಸರ್ವೆ ನಂ.521/6ರಲ್ಲಿ 02 ಎಕರೆ 37 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 125 ಎಲ್‌ಆರ್‌ಎ 2009, ದಿನಾಂಕ:19–08–2002 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 109 ರಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ: 17–02–2009 ರಿಂದ ಅನ್ವಯವಾಗುವಂತೆ ಇನ್ನೂ ಐದು ವರ್ಷಗಳವರೆಗೆ ಕಾಲಾವಧಿ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ.ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಭೂ ಸುಧಾರಣೆ).

P.R. 214

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಆಯುಷ್ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು–560009

### ಅಧಿಸೂಚನೆ

**ಸಂಖ್ಯೆ: ಎಸ್‌ಆರ್‌ಸಿ/66/2003–04, ದಿನಾಂಕ:05–03–2013**

**ವಿಷಯ:–** ಮಾನ್ಯ ಉಚ್ಚ ನ್ಯಾಯಾಲಯದ W.P.No. 64508/2010/(S-KAT) ರಲ್ಲಿ ನೀಡಿದ ಆದೇಶದಂತೆ ಆಯುಷ್ ಇಲಾಖೆಯಲ್ಲಿನ ಫಿಜಿಷಿಯನ್ ಗ್ರೇಡ್–2 (ಹೋಮಿಯೋಪತಿ) ಹುದ್ದೆಗಳಿಗೆ ಪರಿಷ್ಕೃತ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ::ಡಿಪಿಎಆರ್/89/ಎಸ್‌ಆರ್‌ಡಿ/2001, ದಿನಾಂಕ: 29–05–2002.
2. ವಿಶೇಷ ನೇಮಕಾತಿ ಸಮಿತಿ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/38/2003–04 ದಿನಾಂಕ:06–01–2004.
3. ಮಾನ್ಯ ಉಚ್ಚ ನ್ಯಾಯಾಲಯದ W.P.No. 64508/2010/(S-KAT) ರಲ್ಲಿ ನೀಡಿದ ಆದೇಶ.
4. ವಿಶೇಷ ನೇಮಕಾತಿ ಸಮಿತಿಯ ತಿಳುವಳಿಕೆ ಪತ್ರ ಸಂಖ್ಯೆ:ಎಸ್‌ಆರ್‌ಸಿ/66/2003–04, ದಿನಾಂಕ: 31–01–2013.
5. ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ದಿನಾಂಕ:02–03–2013.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಆಯುಷ್ ಇಲಾಖೆಯಲ್ಲಿನ ಫಿಜಿಷಿಯನ್ ಗ್ರೇಡ್–2, (ಹೋಮಿಯೋಪತಿ) ಹುದ್ದೆಗಳಿಗೆ ಉಲ್ಲೇಖ(1)ರ ಸರ್ಕಾರದ ಅಧಿಸೂಚನೆಯ ಪ್ರಕಾರ ಅರ್ಜಿಗಳನ್ನು ಆಹ್ವಾನಿಸಿ, ಉಲ್ಲೇಖ(2)ರ ವಿಶೇಷ ನೇಮಕಾತಿ ಸಮಿತಿಯ ಅಧಿಸೂಚನೆಯಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿ, ಸದರಿ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಸರ್ಕಾರದ ನೇಮಕಾತಿ ಆದೇಶ ನೀಡಲಾಗಿತ್ತು.

ಸದರಿ ನೇಮಕಾತಿ ವಿರುದ್ಧ ಡಾ॥ ಸುನೀಲ್ ಅರ್ಜುಲ್ ಪೋಲ್ ಇವರು ಫಿಜಿಷಿಯನ್ ಗ್ರೇಡ್–2 (ಹೋಮಿಯೋಪತಿ) ಹುದ್ದೆಗೆ ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆಹೊಂದಿದ್ದು, ತದನಂತರ ಅಂತಿಮ ಆಯ್ಕೆಪಟ್ಟಿಯಲ್ಲಿ ಅವರ ಹೆಸರನ್ನು ಕೈಬಿಟ್ಟಿದ್ದ ಮೇರೆಗೆ ಕರ್ನಾಟಕ ಆಡಳಿತ ನ್ಯಾಯಮಂಡಳಿ ಇಲ್ಲಿ ಅರ್ಜಿ ಸಂಖ್ಯೆ:1448/2004 ಅರ್ಜಿ ಸಲ್ಲಿಸಿದ ಮೇರೆಗೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿದಾರರನ್ನು ಆಯ್ಕೆಗೆ ಪರಿಗಣಿಸುವಂತೆ ಆದೇಶಿಸಿರುತ್ತದೆ.

ರಾಜ್ಯ ಸರ್ಕಾರವು ಸದರಿ ಆದೇಶದ ವಿರುದ್ಧ ಮೇಲ್ಮನವಿಯನ್ನು ಅರ್ಜಿ ಸಂಖ್ಯೆ: W.P.No. 64508/2010/(S-KAT) ರಲ್ಲಿ ಸಲ್ಲಿಸಿದ ಮೇರೆಗೆ ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ:25–09–2012ರಲ್ಲಿ ಸೂಚಿಸಿದಂತೆ ಡಾ॥ ಸುನೀಲ್ ಅರ್ಜುಲ್ ಪೋಲ್ ಮತ್ತು ಡಾ॥ ವಿಮಲಾ. ಎಸ್ ಇವರಿಗೆ ತನ್ನ ಅಹವಾಲನ್ನು ಸಲ್ಲಿಸಲು ಉಲ್ಲೇಖ(4)ರಲ್ಲಿ ತಿಳಿಸಲಾಗಿತ್ತು. ಅದರಂತೆ ಸದರಿ ವೈದ್ಯರುಗಳು ತಮ್ಮ ಅಹವಾಲನ್ನು ಸಲ್ಲಿಸಿದ್ದನ್ನು ಆಯುಕ್ತರ

ಅಧ್ಯಕ್ಷತೆಯಲ್ಲಿ ದಿನಾಂಕ: 02–03–2013ರಂದು ನಡೆದ ಸಭೆಯಲ್ಲಿ ಪರಿಶೀಲಿಸಿ ದಿನಾಂಕ: 01/09/2008ರ ಸರ್ಕಾರದ ಸುತ್ತೋಲೆಯನ್ನು ಗಣನೆಗೆ ತೆಗೆದುಕೊಂಡು ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪಿನಂತೆ ಡಾ॥ ಸುನೀಲ್ ಅರ್ಜುಲ್ ಪೋಲ್ ಇವರನ್ನು ಫಿಜಿಷಿಯನ್ ಗ್ರೇಡ್–2 (ಹೋಮಿಯೋಪತಿ) ಹುದ್ದೆಗೆ ಅಂತಿಮ ಆಯ್ಕೆಪಟ್ಟಿಯಲ್ಲಿ ಹೆಸರನ್ನು ಸೇರಿಸಿ ಪ್ರಕಟಿಸಲು ತೀರ್ಮಾನಿಸಿತು.

ಅದರಂತೆ ಉಲ್ಲೇಖ(2)ರಲ್ಲಿ ಪ್ರಕಟಿಸಿದ ಫಿಜಿಷಿಯನ್ ಗ್ರೇಡ್–2 (ಹೋಮಿಯೋಪತಿ)ಯ ಅಂತಿಮ ಆಯ್ಕೆಪಟ್ಟಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಿದೆ.

**ಪರಿಷ್ಕೃತ ಅಂತಿಮ ಆಯ್ಕೆಪಟ್ಟಿ**

| Sl.No. | Reg No./ Appl.No. | Name of the Candidate | Date of Birth | Reservation | %age | Selected Under |
|---|---|---|---|---|---|---|
| 1 | 318/140674 | PRASANNA KUMAR K | 22.07.1976 | GM/R | 69.27 | GM/G |
| 2 | 92/109852 | BRUNDA S | 11.05.1977 | GM/F | 69.23 | GM/G |
| 3 | 651/161731 | SRIDEVI | 10.061970 | GM/F | 65.25 | GM/F |
| 4 | 179/105093 | ANIL KUMAR | 30.07.1977 | IIA | 65.08 | IIA/G |
| 5 | 431/164735 | MAMTA | 12.10.1977 | GM/F/R | 64.63 | GM/F |
| 6 | 187/105097 | MANJULA R. KAGINELLI | 04.04.1976 | ST/F | 63.91 | ST/G |
| 7 | 63/147732 | SHIVAPPA JANAGOUD | 20.03.1972 | GM/R | 60.74 | GM/R |
| *8 | 71/145426 | PREMA RATHOD | 08.11.1977 | SC/F | 60.65 | SC/F |
| 9 | 233/163395 | SATISHA | 22.07.1975 | C-1 | 59.91 | C-I/G |
| *10 | 224/109744 | SUNIL POL | 22.07.1977 | SC/R | 58.95 | SC/G |

*ಕ್ರಸಂ.8ರ ಅಭ್ಯರ್ಥಿಯನ್ನು ಪ.ಜಾ(ಮಹಿಳಾ) ಅಭ್ಯರ್ಥಿಯಾಗಿ ಮತ್ತು ಕ್ರಸಟ.10ರ ಅಭ್ಯರ್ಥಿಯನ್ನು ಪ.ಜಾ(ಸಾಮಾನ್ಯ) ಅಡಿಯಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಹಾಗೂ ಸರ್ಕಾರಿ ಸುತ್ತೋಲೆ ದಿನಾಂಕ:01/09/2008ರಂತೆ ಆಯ್ಕೆ ಮಾಡಲಾಗಿದೆ.

**ಈ ಅಭ್ಯರ್ಥಿಗಳ ಆಯ್ಕೆಯು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.–**

1. ಅಭ್ಯರ್ಥಿಗಳ ಆಯ್ಕೆಯು ನ್ಯಾಯಾಲಯದಲ್ಲಿ ಹೂಡಲಾಗುವ ಪ್ರಕರಣಗಳಲ್ಲಿನ ತೀರ್ಪಿನನ್ವಯ ಪುನರ್‌ವಿಲೋಕನೆಗೆ ಒಳಪಡಿಸುವ ಹಾಗೂ ಅನರ್ಹ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಗೊಳಿಸುವ ನಿಬಂಧನೆ ಮತ್ತು ಷರತ್ತುಗಳಿಗೆ ಒಳಪಟ್ಟಿರುತ್ತದೆ.
2. ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿರುವ ಕ್ರ.ಸಂ.10ರ ಅಭ್ಯರ್ಥಿಯು ಸಲ್ಲಿಸಿರುವ ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಯಾವುದೇ ಪ್ರಮಾಣ ಪ್ರತದಲ್ಲಿ ನಮೂದಿಸಿದ ಅಂಶಗಳು ವ್ಯತಿರಿಕ್ತವಾಗಿದ್ದಲ್ಲಿ, ಅವರ ಆಯ್ಕೆಯನ್ನು ಪುನರ್ ಪರಿಶೀಲಿಸಿ, ರದ್ದುಗೊಳಿಸಲಾಗುವುದು.
3. ಕ್ರ.ಸಂ.10ರ ಅಭ್ಯರ್ಥಿಯು ಸಲ್ಲಿಸಿರುವ ಅಂಕ ಪಟ್ಟಿಗಳನ್ನು/ಪ್ರಮಾಣ ಪತ್ರಗಳನ್ನು ಸಂಬಂಧಪಟ್ಟ ಪ್ರಾಧಿಕಾರದ ಪರಿಶೀಲನೆಗೆ ಒಳಪಡಿಸಿ, ಅವರು ನೀಡಲಾಗುವ ಅಭಿಪ್ರಾಯಕ್ಕೆ ಒಳಪಟ್ಟಿರುತ್ತದೆ. ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳ/ಪ್ರಮಾಣ ಪತ್ರಗಳ ನೈಜತೆಯ ಬಗ್ಗೆ ವ್ಯತಿರಿಕ್ತ ವರದಿ ಸ್ವೀಕೃತವಾದಲ್ಲಿ, ಅಭ್ಯರ್ಥಿಯ ಆಯ್ಕೆಯನ್ನು ಪುನರ್ ಪರಿಶೀಲಿಸಿ ಯಾವುದೇ ಸೂಚನೆ ನೀಡದಂತೆ ರದ್ದುಗೊಳಿಸಲಾಗುವುದು.
4. ಅಂತಿಮ ಆಯ್ಕೆಪಟ್ಟಿಯಲ್ಲಿ ಆಯ್ಕೆಯಾಗಿರುವ ಕ್ರ.ಸಂ.10ರ ಅಭ್ಯರ್ಥಿಯ ನೇಮಕಾತಿಯು ಜಾತಿ/ಆದಾಯ/ಸಿಂಧುತ್ವ ಪ್ರಮಾಣ ಪತ್ರಗಳು/ ವೈದ್ಯಕೀಯ ಪರಿಶೀಲನಾ ವರದಿಗಳು/ಆರಕ್ಷಕ ವಿಚಾರಣಾ ವರದಿಗಳ ಸ್ವೀಕೃತಿ / ಪರಿಶೀಲನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಎಲ್ಲಾ ಅಗತ್ಯ ವರದಿಗಳು ಸ್ವೀಕೃತವಾಗಿ ಅಂಗೀಕೃತವಾಗದೆ ಸದರಿ ಅಭ್ಯರ್ಥಿಗೆ ನೇಮಕಾತಿ ಹಕ್ಕು ಪ್ರಾಪ್ತವಾಗುವುದಿಲ್ಲ ಹಾಗೂ ಜಾತಿ ಸಿಂಧುತ್ವ ಪ್ರಮಾಣ ಪತ್ರ ಮತ್ತು ಪೊಲೀಸ್ ಪೂರ್ವಾಪರ ವರದಿಗಳು ಸ್ವೀಕೃತವಾದ ನಂತರ ನೇಮಕಾತಿ ಆದೇಶ ನೀಡಲಾಗುವುದು.
5. ಈ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆ ಹೊಂದಿರುವ ಕ್ರ.ಸಂ.10ರ ಅಭ್ಯರ್ಥಿಯ ಜೇಷ್ಠತೆಯು ನೇಮಕಾತಿ ಹೊಂದಿದ ಮೇಲೆ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಚಾಲ್ತಿಯಲ್ಲಿ ಬರುವುದು.

**ವಿ.ಬಿ. ಪಾಟೀಲ್,**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು
ಹಾಗೂ ಆಯುಷ್ ಇಲಾಖೆ, ಬೆಂಗಳೂರು–9

**P.D. 57**

**ಪುರಸಭಾ ಕಾರ್ಯಾಲಯ ಸಿರುಗುಪ್ಪ–583121, ಬಳ್ಳಾರಿ ಜಿಲ್ಲೆ**

**ಅಧಿಸೂಚನೆ**

**ನಂ.ಪುಸಸಿ/ಮಾ.ಹ.ಕಾ/2012–13, ದಿನಾಂಕ:20–12–2012**

ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕರಣ 5(1) ರನ್ವಯ ಪುರಸಭೆ ಸಿರುಗುಪ್ಪಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| ಸ್ಥಳೀಯ ಸಂಸ್ಥೆಯ ಹೆಸರು | ಅಧಿಕಾರಿ / ನೌಕರರ ಹೆಸರು | ನಾಮ ನಿರ್ದೇಶಿತ ಹುದ್ದೆ |
|---|---|---|
| ಪುರಸಭೆ, ಸಿರುಗುಪ್ಪ, ಜಿಲ್ಲೆ ಬಳ್ಳಾರಿ | 1. ಶ್ರೀ ಕೆ. ಅನಂತರಾವ್ ಕಛೇರಿ ವ್ಯವಸ್ಥಾಪಕರು, ಪುರಸಭೆ ಸಿರುಗುಪ್ಪ | ಸಾರ್ವಜನಿಕ ಮಾಹಿತಿ ಅಧಿಕಾರಿ |
| | 2. ಶ್ರೀ ಗವಿಯಪ್ಪ, ಕಂದಾಯಾಧಿಕಾರಿ, ಪುರಸಭೆ ಸಿರುಗುಪ್ಪ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |

**ಮುಖ್ಯಾಧಿಕಾರಿ**
ಪುರಸಭೆ ಸಿರುಗುಪ್ಪ

**P.D. 58**

## ಪುರಸಭಾ ಕಾರ್ಯಾಲಯ ನಂಜನಗೂಡು 571301 ಮೈಸೂರು ಜಿಲ್ಲೆ

### ಅಧಿಸೂಚನೆ

### ಕ್ರ.ಸಂ.ಸಿಬ್ಬಂದಿ(1) ಪಿಆರ್/367/2012-13, ದಿನಾಂಕ:21-12-2012

ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕರಣ 5(1) ಮೇರೆಗೆ ಅರ್ಜಿದಾರರಿಗೆ ಸಕಾಲಕ್ಕೆ ಹಾಗೂ ನಿಗಧಿತ ಅವಧಿಯೊಳಗೆ ಅಗತ್ಯ ಮಾಹಿತಿ ನೀಡಲು ಅನುಕೂಲಕ್ಕಾಗಿ ಸದರಿ ಅಧಿನಿಯಮದ ಮೇರೆಗೆ ಈ ಕೆಳಕಂಡ ನಂಜನಗೂಡು ಪುರಸಭೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಾಖಾ ಮುಖ್ಯಸ್ಥರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಿಸಲಾಗಿರುತ್ತದೆ.

| ಕ್ರ.ಸಂ. | ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು/ಹುದ್ದೆ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹೆಸರು/ಹುದ್ದೆ | ಕಾರ್ಯವ್ಯಾಪ್ತಿ |
|---|---|---|---|
| 01 | ಕುಪ್ಪುರಾಜು, ಪ್ರಥಮ ದರ್ಜೆ ಸಹಾಯಕರು | ಕಲ್ಪ. ಜಿ.ಕೆ. ಪ್ರಥಮ ದರ್ಜೆ ಸಹಾಯಕರು | ಆಡಳಿತ ಶಾಖೆಗೆ ಸಂಬಂಧಿಸಿದ ವಿಷಯಗಳು |
| 02 | ಯಶಸ್ವಿನಿ. ಕೆ.ವಿ. ಕಿರಿಯ ಅಭಿಯಂತರರು | ಹರ್ಷ, ಕಿರಿಯ ಅಭಿಯಂತರರು | ತಾಂತ್ರಿಕ ಶಾಖೆಗೆ ಸಂಬಂಧಿಸಿದ ವಿಷಯಗಳು |
| 03 | ರಾಣಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು | ಶಫೀವುಲ್ಲಾ, ದ್ವಿತೀಯ ದರ್ಜೆ ಸಹಾಯಕರು | ಕಂದಾಯ ಶಾಖೆಗೆ ಸಂಬಂಧಿಸಿದ ವಿಷಯಗಳು |
| 04 | ಭಾರತಿ, ಎನ್. ಪರಿಸರ ಅಭಿಯಂತರರು | ರೇಖಾ, ಆರ್. ಕಿರಿಯ ಆರೋಗ್ಯ ನಿರೀಕ್ಷಕರು | ಆರೋಗ್ಯ ಶಾಖೆಗೆ ಸಂಬಂಧಿಸಿದ ವಿಷಯಗಳು |
| 05 | ತೇಜಸ್ವಿನಿ ಕೆ. ಅಕೌಂಟೆಂಟ್, | ಲೀಲಾವತಿ. ಸಿ ದ್ವಿತೀಯ ದರ್ಜೆ ಸಹಾಯಕರು | ಲೆಕ್ಕ ಶಾಖೆಗೆ ಸಂಬಂಧಿಸಿದ ವಿಷಯಗಳು |
| 06 | ವೆಂಕಟನಾಯ್ಕ್, ಕಮ್ಯೂನಿಟಿ ಆಫೇರ್ ಆಫೀಸರ್ | ವೀಣಾ, ಕಮ್ಯೂನಿಟಿ ಆರ್ಗ್‌ನೈಸರ್ | ಎಸ್.ಜೆ.ಎಸ್.ಆರ್.ವೈ. ಶಾಖೆಗೆ ಸಂಬಂಧಿಸಿದ ವಿಷಯಗಳು |

**ರಮೇಶ್. ಡಿ**
ಮುಖ್ಯಾಧಿಕಾರಿ
ಪುರಸಭೆ ನಂಜನಗೂಡು

**P.D. 59**

## ಜಿಲ್ಲಾಧಿಕಾರಿಯವರ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ತಿದ್ದುಪಡಿ ಅಧಿಸೂಚನೆ

### ನಂ:ಗಣಿ/ಸಿ.ಆರ್-5.2012-13, ದಿನಾಂಕ:13-3-2013

**ವಿಷಯ:-** ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್) ನಿಯಂತ್ರಣ ಅಧಿನಿಯಮ 2011 ರಂತೆ ಕಲ್ಲುಪುಡಿ ಮಾಡುವ ಘಟಕಗಳಿಗೆ ಸುರಕ್ಷಿತ ವಲಯದ ಘೋಷಣೆ ಸಂಬಂಧವಾಗಿ

**ಉಲ್ಲೇಖ:-** ಕರ್ನಾಟಕ ರಾಜ್ಯಪತ್ರ ಪ್ರಕಟಣೆ ಸಂಖ್ಯೆ:ಗಣಿ/ಸಿ.ಆರ್-72/2011-12 ದಿನಾಂಕ:29-09-2012/ದಿನಾಂಕ:11-10-2012.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್) ನಿಯಂತ್ರಣ ಆಧ್ಯಾದೇಶ 2011 ರ ನಿಯಮ 6(5) ರಂತೆ, ನಮೂದಿಸಿರುವ ಪ್ರದೇಶಗಳನ್ನು ಕಲ್ಲುಪುಡಿ ಮಾಡುವ ಘಟಕಗಳಿಗೆ ಸುರಕ್ಷಿತ ವಲಯವನ್ನು ಗುರ್ತಿಸಿದ್ದು, ಗುರ್ತಿಸಿರುವ ಪ್ರದೇಶಗಳಿಗೆ ಅಧಿಸೂಚನೆ ಹೊರಡಿಸಿ, ಉಲ್ಲೇಖಿತ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ:11-10-2012 ರಂದು ಪ್ರಕಟಣೆಯಾಗಿದ್ದು, ದಿನಾಂಕ:29-09-2012 ರಂದು ಅಧಿಸೂಚನೆ ಹೊರಡಿಸಿರುವ ಪತ್ರದಲ್ಲಿ ಯಲಗಲಹಳ್ಳಿ ಗ್ರಾಮದ ಸ.ನಂ. 464/1 ಬದಲಾಗಿ 464 ಎಂದು ತಪ್ಪಾಗಿ ನಮೂದಾಗಿದ್ದು,, ಈ ಸ.ನಂ. ನ್ನು 464/1 ಎಂದು ತಿದ್ದುಪಡಿ ಮಾಡಿ, ಇದನ್ನು ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಕೆಳಕಂಡಂತೆ ಕರ್ನಾಟಕ ರಾಜ್ಯ ಪತ್ರದಲ್ಲಿ ತಿದ್ದುಪಡಿ ಅಧಿಸೂಚನೆಯನ್ನು ಪ್ರಕಟಿಸಲು ಕೋರಿದೆ.

**ಚಿಕ್ಕಬಳ್ಳಾಪುರ ತಾಲ್ಲೂಕು ಯಲಗಲಹಳ್ಳಿ ಗ್ರಾಮದ ಸ.ನಂ. ವಿವರ ಈ ಕೆಳಗಿನಂತಿದೆ.**

ಈ ಹಿಂದೆ ಪ್ರಕಟಣೆಯಾಗಿರುವ ವಿವರ

| ಕ್ರ. ಸಂ. | ಸ.ನಂ. | ವಿಸ್ತೀರ್ಣ (ಎಕರೆ) | ಜಮೀನು ವರ್ಗೀಕರಣ |
|---|---|---|---|
| 1 | 464 | 1.39 | ಖಾಸಗಿ |

ತಿದ್ದುಪಡಿ ಪ್ರಕಟಣೆಯಾಗಬೇಕಾಗಿರುವ ವಿವರ

| ಕ್ರ. ಸಂ. | ಸ.ನಂ. | ವಿಸ್ತೀರ್ಣ (ಎಕರೆ) | ಜಮೀನು ವರ್ಗೀಕರಣ |
|---|---|---|---|
| 1 | 464/1 | 1.39 | ಖಾಸಗಿ |

**ವಿಶೇಷ ಸೂಚನೆ:** ಖಾಸಗಿ ಜಮೀನಿನಲ್ಲಿ ಜಮೀನಿನ ಮಾಲೀಕರು ಅಥವಾ ಅವರ ಅನುಮತಿ ಪಡೆದವರು ಮಾತ್ರ ಕ್ರಷರ್ ಸ್ಥಾಪಿಸಲು ಅರ್ಜಿ ಸಲ್ಲಿಸಬಹುದು.

ಈ ಮೇಲ್ಕಂಡ ಕಲ್ಲುಪುಡಿ ಮಾಡುವ ಕ್ರಷರ್ ಸುರಕ್ಷಿತ ವಲಯಕ್ಕೆ ಅರಣ್ಯ, ವ್ಯವಸಾಯ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆಗಳು ವರದಿಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು
ಚಿಕ್ಕಬಳ್ಳಾಪುರ ಜಿಲ್ಲೆ

**P.R. 238**

## IN THE COURT OF 1ST ACMM COURT BANGALORE CITY

It is hereby notified to the public that the Central Police Station Bangalore city have seized the following vehicles as unclaimed and such vehicles are lying in the Police Station as unclaimed so far. Hence the owners of the properties & vehicles may put their claim within three months from the date of this publication.

Bangalore City
Date:

1st Addl. Chief Metropolitan
Magistrate, Bangalore City

List of unclaimed vehicles are lying in Central Police Station, Bangalore city which have been seized under cases.

| SL NO | CR.NO & P.F. NO | VEHICLE & REG NO | ENGIN NO | CHASIS NO & |
|---|---|---|---|---|
| 01 | 266/96 U/S 379 I.P.C.<br>P.F. NO. 22/97 | KENETIC HONDA<br>KA-02-H-9087 | NO | NO |

Bangalore City
Date:

1st Addl. Chief Metropolitan
Magistrate, Bangalore City

**P.R.239**

**SC - 5**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್-363/2012, ದಿನಾಂಕ:04-04-2013**

**ಅರ್ಜಿದಾರರು:**

ಶ್ರೀಮತಿ ಜಯಪ್ರಭಾ ಕೋ, ಲೇಟ್ ತಿಪ್ಪೇಸ್ವಾಮಿ, 23, ವರ್ಷ,
ವಾಸ: ಬೊಗಳರಹಟ್ಟಿ, ಚಿತ್ರದುರ್ಗ (ತಾ) & (ಜಿ).
(ಇತರೆ ಮೂರು ಜನರು)

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀ ರಮೇಶ್ ಸಿ. ತಂದೆ: ಚಿತ್ತಪ್ಪ,
ಲಾರಿ ಸಂಖ್ಯೆ:ಕೆಎ-16/ಎ-7547ರ ವಾಹನದ ಮಾಲೀಕರು,
ವಾಸ: ಗೋಪಾಲಪುರ ರಸ್ತೆ, ಚಿತ್ರದುರ್ಗ

2) ದಿ ಡಿವಿಜಿನಲ್ ಮ್ಯಾನೇಜರ್, ಶ್ರೀರಾಮ ಜನರಲ್ ಇನ್‌ಷೂರನ್ಸ್ ಕಂ. ಲಿ., ಡಿವಿಜಿನಲ್ ಆಫೀಸ್, ಇ-8/ಇ.ಪಿ.ಐ.ಪಿ. ಆರ್.ಐ.ಐ.ಸಿ.ಓ. ಇಂಡಸ್ಟ್ರೀಯಲ್ ಏರಿಯಾ, ಸೀತಾಪುರ, ಜೈಪುರ, ರಾಜಸ್ಥಾನ-22

**ಅಧಿ ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ತಿಪ್ಪೇಸ್ವಾಮಿ, ಇವರು 1ನೇ ಪ್ರತಿವಾದಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ:22-08-2011 ರಂದು ವಾಹನ ಅಪಘಾತ ಉಂಟಾಗಿ ಮೃತರಾದ ಪ್ರಯುಕ್ತ ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ

ನಿಗದಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್. ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**P.R. 240**
**SC – 10**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–115/2013, ದಿನಾಂಕ:04–04–2013**

**ಅರ್ಜಿದಾರರು:**

1) ಶ್ರೀಮತಿ ಟಿ. ರೂಪ ಕೋ. ಲೇಟ್ ಸಿ. ಮಹಾಲಿಂಗಪ್ಪ, 28 ವರ್ಷ, ವಾಸ: 5ನೇ ಕ್ರಾಸ್, ಮುನಿಸಿಪಲ್ ಕಾಲೋನಿ, ಕೆಳಗೋಟೆ, ಚಿತ್ರದುರ್ಗ.
2) ಕು॥ ಎಂ. ಸುಚಿತ್ರ, ತಂದೆ: ಲೇಟ್ ಸಿ. ಮಹಾಲಿಂಗಪ್ಪ,
3) ಕು: ಎಂ.ಶಿವು ತಂದೆ: ಲೇಟ್ ಸಿ. ಮಹಾಲಿಂಗಪ್ಪ,
4) ಕು: ಎಂ. ಶ್ರೀನಿವಾಸ ತಂದೆ: ಲೇಟ್ ಸಿ. ಮಹಾಲಿಂಗಪ್ಪ,
5) ಶ್ರೀ ಚಂದ್ರಪ್ಪ ತಂದೆ: ಗುಡ್ಡಪ್ಪ
6) ಶ್ರೀಮತಿ ತಿಮ್ಮಕ್ಕ ಕೋಂ. ಚಂದ್ರಪ್ಪ

**ವಿರುದ್ಧ**

**ಪ್ರತಿವಾದಿಗಳು:**

ಲೆಕ್ಕಾಧಿಕಾರಿಗಳು, ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ರವರ ಕಛೇರಿ, ವಾ, ಕಾ ಮತ್ತು ಪಾಲನಾ ವಿಭಾಗ, ಚಿತ್ರದುರ್ಗ

**ಅಧಿ ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಸಿ. ಮಹಾಲಿಂಗಪ್ಪ ತಂದೆ: ಚಂದ್ರಪ್ಪ, ಇವರು ಪ್ರತಿವಾದಿಯಲ್ಲಿ ಸಹಾಯಕ ಮಾರ್ಗದಾಳು ಆಗಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ:05–10–2011 ರಂದು ವಿದ್ಯುತ್ ಹರಿದು ಮೃತರಾದ ಪ್ರಯುಕ್ತ ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್. ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**P.R. 241**
**SC – 10**

**ಯುವಜನ ಸೇವಾ ಸಚಿವಾಲಯ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಯುಸೇಇ 51 ಯುಇಸೇ 2011 ಬೆಂಗಳೂರು, ದಿನಾಂಕ: 05–04–2013**

**ವಿಷಯ:** ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಉಪ ನಿರ್ದೇಶಕರುಗಳ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ವಾಪ್ರಯು 24 ಯುಇಸೇ 07 ದಿನಾಂಕ: 22–10–2007.

2. ದಿನಾಂಕ: 16–03–2013 ರ ಡಿವೈಎಸ್ಎಸ್/ಸಿ1/16/2012–13ನೇ ಸಂಖ್ಯೆಯ ಪತ್ರ.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ಉಪ ನಿರ್ದೇಶಕರುಗಳ ವೃಂದದ ದಿನಾಂಕ: 01–01–2013 ರಲ್ಲಿರುವಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಅಧಿಕೃತ ಜ್ಞಾಪನ ಪತ್ರದೊಂದಿಗೆ ಲಗತ್ತಿಸಿ ಹೊರಡಿಸಲಾಗಿದೆ. ಈ ಜೇಷ್ಠತಾ ಪಟ್ಟಿಯಲ್ಲಿ ನ್ಯೂನ್ಯತೆ, ತಪ್ಪು, ವಗೈರೆಗಳ ಬಗ್ಗೆ ಉಪ ನಿದೇಶಕರುಗಳ ಮತ್ತು ಇಲಾಖೆಯ ಇತರೆ ಅಧಿಕಾರಿಗಳ ಆಕ್ಷೇಪಣೆಗಳು ಇದ್ದಲ್ಲಿ ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 15 ದಿವಸಗಳ ಒಳಗಾಗಿ ಸರ್ಕಾರಕ್ಕೆ ಮಾಹಿತಿಯನ್ನು ಕಳುಹಿಸಬೇಕೆಂದು ಕೋರಲಾಗಿದೆ.

**ಕೆ.ಎ. ಹಿದಾಯತ್ತುಲ್ಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ,

**ದಿನಾಂಕ: 01–01–2013 ರಲ್ಲಿ ಇರುವಂತೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ**

**ಅನುಬಂಧ–2**

| ಕ್ರ. ಸ. | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1. | ಶ್ರೀ ವಸಂತ ಕೆ. ಗುಡೋಡಗಿ | ಡಿ.ಆರ್. | 01.05.1949 | 01.06.1973 | 07.08.1978 | 07.08.1978 | ವಯೋ ನಿವೃತ್ತಿ |
| 2. | ಶ್ರೀ ಆರ್.ಎಲ್. ಪಾಟೀಲ್ | ಡಿ.ಆರ್. | 01.06.1951 | 08.12.1977 | 07.08.1978 | 07.08.1978 | ವಯೋ ನಿವೃತ್ತಿ |
| 3. | ಶ್ರೀ ಡಿ. ಮುನಿವಾಲ್ ರಾಜು | ಪಿ.ಆರ್. | 23.12.1953 | 14.08.1978 | 14.08.1978 | 14.08.1978 | ರಾಜೀನಾಮೆ ನೀಡಿರುತ್ತಾರೆ |
| 4. | ಶ್ರೀ ಎನ್. ನಾಗರಾಜು | ಪಿ.ಆರ್. | 20.04.1939 | 26.08.1963 | 20.10.1978 | 20.10.1978 | ಸ್ವಯಂ ನಿವೃತ್ತಿ |
| 5. | ಶ್ರೀ ವೈ.ಆರ್. ಕಾಂತರಾಜೇಂದ್ರ | ಪಿ.ಆರ್. | 20.10.1952 | 21.08.1978 | 20.04.1989 | 20.04.1989 | ವಯೋ ನಿವೃತ್ತಿ ಹೊಂದಿರುತ್ತಾರೆ |
| 6. | ಶ್ರೀ ಸಿ. ಈ. ಶೆಟ್ಟರ್ | ಪಿ.ಆರ್. | 18.12.1950 | 07.08.1978 | 20.04.1989 | 20.04.1989 | ವಯೋ ನಿವೃತ್ತಿ |
| 7. | ಶ್ರೀ ಬಿ.ಎ. ಅಶೋಕ್ ಕುಮಾರ್ | ಪಿ.ಆರ್. | 23.10.1953 | 02.08.1978 | 20.04.1989 | 20.04.1989 | ಸ್ವಯಂ ನಿವೃತ್ತಿ |
| 8. | ಶ್ರೀಮತಿ ಎಂ.ಎಸ್. ಲಲಿತ | ಪಿ.ಆರ್. | 01.06.1952 | 07.07.1973 | 20.04.1989 | 20.04.1989 | ವಿಶೇಷ ಸ್ವಯಂ ನಿವೃತ್ತಿ |
| 9. | ಶ್ರೀ ಮರಿಸ್ವಾಮಿ | ಪಿ.ಆರ್. | 01.07.1943 | 04.08.1978 | 20.04.1989 | 20.04.1989 | ಮೌತಿಯಾಗಿದ್ದಾರೆ |
| 10. | ಶ್ರೀ ಎ. ಎಜಾಜ್ ಆಲಿ | ಪಿ.ಆರ್. | 02.03.1950 | 29.07.1978 | 03.06.1992 | 03.06.1992 | ವಯೋ ನಿವೃತ್ತಿ |
| 11. | ಶ್ರೀಮತಿ ಎಸ್. ಲಲಿತಮ್ಮ | ಪಿ.ಆರ್. | 10.04.1952 | 22.09.1975 | 26.05.1992 | 26.05.1992 | ವಯೋ ನಿವೃತ್ತಿ ಹೊಂದಿರುತ್ತಾರೆ |
| 12. | ಶ್ರೀ ಕೆ.ಬಿ. ಬೆಳ್ಳಿಯಪ್ಪ | ಪಿ.ಆರ್. | 21.10.1944 | 22.09.1975 | 30.11.1995 | 30.11.1995 | ವಯೋ ನಿವೃತ್ತಿ |
| 13. | ಶ್ರೀ ಎನ್. ರಾಘವೇಂದ್ರರಾವ್ | ಪಿ.ಆರ್. | 10.08.1946 | 22.09.1975 | 30.11.1995 | 30.11.1995 | ವಯೋ ನಿವೃತ್ತಿ |
| 14. | ಶ್ರೀ ಜಿ.ಕೆ. ರಾಮಕೃಷ್ಣಯ್ಯ | ಪಿ.ಆರ್. | 03.07.1948 | 22.09.1975 | 30.11.1995 | 30.11.1995 | ವಯೋ ನಿವೃತ್ತಿ |
| 15. | ಶ್ರೀ ಮ್ಯಾಥುಜೇಕಬ್ | ಪಿ.ಆರ್. | 09.11.1949 | 22.09.1975 | 30.11.1995 | 30.11.1995 | ವಯೋ ನಿವೃತ್ತಿ |
| 16. | ಶ್ರೀ ಎಂ.ವಿ. ಶ್ರೀನಿವಾಸ್ | ಪಿ.ಆರ್. | 23.12.1950 | 22.09.1975 | 30.11.1995 | 30.11.1995 | ವಯೋ ನಿವೃತ್ತಿ |
| 17. | ಶ್ರೀ ಎಂ.ಪಿ. ಸ್ವಾಮಿ | ಪಿ.ಆರ್. | 02.10.1950 | 22.09.1975 | 30.11.1995 | 30.11.1995 | ಸ್ವಯಂ ನಿವೃತ್ತಿ |
| 18. | ಶ್ರೀ ರಜಿಯುದ್ದೀನ್ | ಪಿ.ಆರ್. | 10.05.1950 | 21.01.1978 | 30.11.1995 | 30.11.1995 | ವಿಶೇಷ ಸ್ವಯಂ ನಿವೃತ್ತಿ |
| 19. | ಶ್ರೀ ಶರಣ್ ಎ. ನವಲಗಿ | ಪಿ.ಆರ್. | 06.08.1951 | 11.01.1978 | 01.01.1996 | 01.01.1996 | ವಯೋ ನಿವೃತ್ತಿ |
| 20. | ಶ್ರೀ ಹೆಚ್.ಬಿ. ನಂಜೇಗೌಡ | ಪಿ.ಆರ್. | 04.07.1950 | 12.01.1978 | 30.11.1995 | 30.11.1995 | ವಿಶೇಷ ಸ್ವಯಂ ನಿವೃತ್ತಿ |
| 21. | ಶ್ರೀ ಎ. ಮಹದೇವಪ್ಪ | ಪಿ.ಆರ್. | 25.08.1952 | 13.01.1978 | 08.12.1995 | 08.12.1995 | ವಯೋ ನಿವೃತ್ತಿ ಹೊಂದಿರುತ್ತಾರೆ |
| 22. | ಶ್ರೀ ಜೆ.ಎಂ. ಅಪ್ಪಚ್ಚು | ಪಿ.ಆರ್. | 19.05.1953 | 27.01.1978 | 15.12.1995 | 15.12.1995 | **ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ** |
| 23. | ಶ್ರೀ ಆರ್. ಮಲ್ಲಿಕಾರ್ಜುನಯ್ಯ | ಪಿ.ಆರ್. | 15.04.1952 | 22.09.1975 | 30.11.1995 | 30.11.1995 | ವಿಶೇಷ ಸ್ವಯಂ ನಿವೃತ್ತಿ |

| ಕ್ರ. ಸ. | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 24. | ಶ್ರೀ ಎಂ.ಆರ್. ಮೋಹಿತೆ | ಪಿ.ಆರ್. | 30.06.1953 | 12.11.1975 | 11.06.1999 | 11.06.1999 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |
| 25. | ಶ್ರೀ ಎಂ.ಎಸ್. ರಮೇಶ್ | ಪಿ.ಆರ್. | 23.07.1964 | 21.04.1997 | 07.08.2012 | 07.08.2012 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |
| 26. | ಶ್ರೀ ಕೆ.ಎಲ್. ಸುಭಾಷ್‌ಚಂದ್ರ | ಪಿ.ಆರ್. | 09.04.1970 | 23.04.1997 | 07.08.2012 | 07.08.2012 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |
| 27. | ಶ್ರೀ ಬಸರಾಜು ಹಡಪದ | ಪಿ.ಆರ್. | 01.06.1970 | 08.05.2006 | 07.08.2012 | 07.08.2012 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |
| 28. | ಶ್ರೀ ರಾಮೇಗೌಡ | ಪಿ.ಆರ್. | 23.05.1953 | 03.09.1979 | 07.08.2012 | 07.08.2012 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |
| 29. | ಶ್ರೀ ಜತೇಂದ್ರ ಶೆಟ್ಟಿ | ಪಿ.ಆರ್. | 17.05.1973 | 05.05.2006 | 28.09.2012 | 28.09.2012 | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ |

**ಕೆ.ಎ. ಹಿದಾಯತ್ತುಲ್ಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ,

**P.R. 242**

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾ ಕಚೇರಿಗಳ ಸಂಕೀರ್ಣ, ಎರಡನೇ ಮಹಡಿ, ಕೊಠಡಿ ಸಂ: 52–53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ

**ವಿಷಯ:–** ಸ್ಥಗಿತಗೊಂಡಿರುವ ಸಹರಾ ಪತ್ತಿನ ಸಹಕಾರ ಸಂಘ ನಿ, ಹರಿಹರ, ದಾವಣಗೆರೆ–ಜಿಲ್ಲೆ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:–**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪ್ರಸ್ತಾವನೆ ಸಂಖ್ಯೆ: ಸನಿ–31/ಸ್ಥಗಿತ/ ಸಹರಾಕ್ರೆಸಿಎಸ್/ ಸಿಆರ್–5/2008–09 ದಿ. 06–09–2008.
2) ಈ ಕಚೇರಿ ಸಮಸಂಖ್ಯೆ ಕಾರಣ ಕೇಳಿ ತಿಳುವಳಿಕೆ ಪತ್ರ ದಿ:26–09–2008.
3) ಈ ಕಚೇರಿ ಅ.ಸ.ಪ ಸಂ: ದಿ: 26–09–2011 ಮತ್ತು ಕಾರಣ ಕೇಳಿ ತಿಳುವಳಿ ದಿ:22–03–2012.
4) ಈ ಕಚೇರಿ ಸಮಾಪನಾ ಆದೇಶ ಸಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–11, 2009–10 ದಿ: 22–03–2012.
5) ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರ ಪತ್ರ ದಿನಾಂಕ: 03–04–2012.
6) ಈ ಕಚೇರಿ ಪುನ:ಶ್ಚೇತನ ಆದೇಶ ಸಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–11/2009–10 ದಿ: 13–04–2012.
7) ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರ ಪತ್ರ ದಿ:08–03–2013.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಕಳೆದ ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ, ಹಾಗೂ ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲವೆಂದು, ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿದ್ದರ ಹಿನ್ನಲೆಯಲ್ಲಿ, ಈ ಬಗ್ಗೆ ಈ ಕಚೇರಿಯಿಂದ ಉಲ್ಲೇಖ(2)ರಲ್ಲಿ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಕಾರಣ, ಉಲ್ಲೇಖ (4)ರ ಈ ಕಚೇರಿ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಲಾಗಿತ್ತು. ಉಲ್ಲೇಖ (5)ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರು ಸಂಘವು ರೂ. 6.09 ಲಕ್ಷ ಷೇರು ಮೊತ್ತ ಹೊಂದಿದ್ದು, ಸದಸ್ಯರಿಂದ ರೂ. 18.99 ಲಕ್ಷ ಸಾಲ ವಸೂಲಾಗಬೇಕಾಗಿದ್ದು, ಈ ಸಾಲ ವಸೂಲಿ ಮಾಡಿದಲ್ಲಿ ಸಂಘವು ಸಶಕ್ತವಾಗಿ ಕಾರ್ಯನಿರ್ವಹಿಸುವ ಸಾಧ್ಯತೆ ಇರುತ್ತದೆ ಎಂದು ಸಂಘವನ್ನು ಪುನ:ಶ್ಚೇತನಗೊಳಿಸಲು ಶಿಫಾರಸ್ಸು ಮಾಡಿದ್ದ ಕಾರಣ ಉಲ್ಲೇಖ (6)ರ ಈ ಕಚೇರಿ ಆದೇಶದಲ್ಲಿ ಸಂಘವನ್ನು ಪುನ:ಶ್ಚೇತನಗೊಳಿಸಲಾಗಿತ್ತು

ದಿನಾಂಕ: 13–04–2012ರಂದು ಆದೇಶ ಹೊರಡಿಸಿ ಪುನ:ಶ್ಚೇತನಗೊಳಿಸಿದರೂ ಸಹ ತಹಲ್ ವರೆಗೂ ಸಂಘದ ಆಡಳಿತ ಸಮಿತಿಯವರು ಸಂಘದ ಲೆಕ್ಕಪರಿಶೋಧನೆ ಮಾಡಿಸದೆ ಯಾವುದೇ ಕಾರ್ಯಕ್ರಮ ರೂಪಿಸಿಕೊಂಡಿರುವುದಿಲ್ಲ, ಕಾರ್ಯಚರಣೆ ಪ್ರಾರಂಭಿಸಿರುವುದಿಲ್ಲ. ಆದ್ದರಿಂದ ಸಂಘವನ್ನು ನೇರವಾಗಿ ಸಮಾಪನೆಗೊಳಿಸಿ ಆದೇಶಿಸಲು ಉಲ್ಲೇಖ(7)ರಲ್ಲಿ ತಿಳಿಸಿರುತ್ತಾರೆ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–11/2008–09, ದಿನಾಂಕ:21–03–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಿಂದ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ:139:ಸಿಎಲ್‌ಎಂ:2010, ದಿನಾಂಕ: 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಗುರುಸ್ವಾಮಿ, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸಹರಾ ಪತ್ತಿನ ಸಹಕಾರ ಸಂಘ ನಿ, ಹರಿಹರ, ದಾವಣಗೆರೆ–ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ73ರ ಪ್ರಕಾರ ಪಡೆದುಕೊಳ್ಳತಕ್ಕದ್ದು, ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74 ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:21–03–2013 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಗುರುಸ್ವಾಮಿ**
ಸಹಕಾರ ಸಂಘಗಳ ಉಪನಿಬಂಧಕರು
ದಾವಣಗೆರೆ ಜಿಲ್ಲೆ, ದಾವಣಗೆರೆ

**P.R. 243**
**SC – 10**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ಅಧಿಸೂಚನೆ**

**ನಂ. 03/ಅಸೂ/ಅಸಿಪಿ/ಸಂವಿ/2013, ಬೆಂಗಳೂರು, ದಿನಾಂಕ: 06–03–2013.**

ಬೆಂಗಳೂರು ನಗರ– ವಿಲ್ಸನ್‌ಗಾರ್ಡನ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಜಯನಗರ 2ನೇ ಬ್ಲಾಕ್‌ನಲ್ಲಿರುವ ಕನಕನಪಾಳ್ಯ ಮುಖ್ಯ ರಸ್ತೆಯು, ಅಶೋಕಾ ಪಿಲ್ಲರ್ ಜಂಕ್ಷನ್‌ನಿಂದ ಆರ್.ವಿ. ಕಾಲೇಜ್ ಜಂಕ್ಷನ್‌ವರೆಗೆ ಸುಮಾರು 40 ಅಡಿ ರಸ್ತೆಯಿದ್ದು, ದ್ವಿಮುಖ ವಾಹನ ಸಂಚಾರದಿಂದ ಕೂಡಿರುತ್ತದೆ. ಈ ರಸ್ತೆಯು ಪೂರ್ವ–ಪಶ್ಚಿಮವಾಗಿ ಹಾದು ಹೋಗಿರುತ್ತದೆ. ಜಯನಗರದ ಕಡೆಯಿಂದ ಹೊಸೂರು ರಸ್ತೆಯ ಕಡೆಗೆ ಬರುವ ಎಲ್ಲಾ ವಾಹನಗಳು ಆರ್.ವಿ. ಟೀಚರ್ಸ್ ಕಾಲೇಜ್ ಬಳಿ ಬಲ ತಿರುವು ಪಡೆದುಕೊಂಡು ಅಶೋಕ ಪಿಲ್ಲರ್ ಜಂಕ್ಷನ್ ಮುಖಾಂತರ ಸಿದ್ದಾಪುರ ಜಂಕ್ಷನ್‌ಗೆ ಬಂದು ಸೇರುತ್ತದೆ. ಇದರಿಂದ ಆರ್.ವಿ. ಕಾಲೇಜ್ ಜಂಕ್ಷನ್‌ನಿಂದ ಅಶೋಕಾ ಪಿಲ್ಲರ್ ವರೆಗೆ ವಾಹನಗಳ ದಟ್ಟಣೆಯು ಅಧಿಕವಾಗಿರುತ್ತದೆ. ಅಲ್ಲದೆ ಈ ರಸ್ತೆಯಲ್ಲಿ ಆರ್.ವಿ. ಸಂಸ್ಥೆಯವರ ಶಾಲಾ ಕಾಲೇಜುಗಳು, ಮಾನ್ಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ವಸತಿ ಗೃಹ ಇರುತ್ತದೆ. ಈ ರಸ್ತೆಯ ಉತ್ತರ ಭಾಗಕ್ಕೆ ಲಾಲ್‌ಬಾಗ್‌ನ ಕಾಂಪೌಂಡ್ ಇದ್ದು, ಈ ಭಾಗದಲ್ಲಿ ವಾಹನಗಳನ್ನು ನಿಲ್ಲಿಸುವುದರಿಂದ, ಇತರ ವಾಹನ ಸಂಚಾರಕ್ಕೆ, ಶಾಲಾ ಮಕ್ಕಳ ಓಡಾಟಕ್ಕೆ ಅಡಚಣೆಯಾಗುವುದರ ಜೊತೆಗೆ ನ್ಯಾಯಾಧೀಶರ ಓಡಾಟದ ವೇಳೆಯಲ್ಲಿ ಸುಗಮ ವಾಹನ ಸಂಚಾರಕ್ಕೆ ತುಂಬಾ ತೊಂದರೆಯಾಗುತ್ತಿದೆ.

ಸಾರ್ವಜನಿಕ ಸುಗಮ ವಾಹನ ಸಂಚಾರದ ಹಿತದೃಷ್ಟಿಯಿಂದ ಜಯನಗರ 2ನೇ ಬ್ಲಾಕ್‌ನಲ್ಲಿರುವ ಕನಕನಪಾಳ್ಯ ಮುಖ್ಯರಸ್ತೆಯಲ್ಲಿ, ಅಶೋಕ ಪಿಲ್ಲರ್ ಜಂಕ್ಷನ್‌ನಿಂದ ಆರ್.ವಿ. ಕಾಲೇಜ್ ಜಂಕ್ಷನ್ ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿಬಂಧನೆಗಳನ್ನು ಆದೇಶಿಸಿರುತ್ತೇನೆ.

**ಕನಕನಪಾಳ್ಯ ಮುಖ್ಯ ರಸ್ತೆ :** **ಜಯನಗರ 2ನೇ ಬ್ಲಾಕ್‌ನಲ್ಲಿರುವ ಕನಕನಪಾಳ್ಯ ಮುಖ್ಯ ರಸ್ತೆಯಲ್ಲಿ, ಅಶೋಕ ಪಿಲ್ಲರ್ ಜಂಕ್ಷನ್‌ನಿಂದ ಆರ್. ವಿ. ಕಾಲೇಜ್ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕವನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ 09–03–2013 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ 06–03–2013 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ,** ಐ.ಪಿ.ಎಸ್.
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**P.R. 250**
**SC - 100**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ಅಧಿಸೂಚನೆ**

**ನಂ. 05/ಅಸೂ/ಅಸಿಪಿ/ಸಂವಿ/2013, ಬೆಂಗಳೂರು, ದಿನಾಂಕ: 06–03–2013.**

ಬೆಂಗಳೂರು ನಗರ ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಯ ಬಿ.ಟಿ.ಎಂ. 100 ಅಡಿ ವರ್ತುಲ ರಸ್ತೆಯಲ್ಲಿ ಕೇಂದ್ರ ರೇಷ್ಮೆ ಮಂಡಳಿ ಜಂಕ್ಷನ್ ಮತ್ತು ಜಯದೇವ ಜಂಕ್ಷನ್ ನಡುವೆ ಉಂಟಾಗುತ್ತಿದ್ದ ಸಂಚಾರ ಒತ್ತಡವನ್ನು ನಿಯಂತ್ರಿಸುವ ಸಲುವಾಗಿ ರೇಷ್ಮೆ ಮಂಡಳಿ ವೃತ್ತದ ಕಡೆಯಿಂದ ಬಿ.ಟಿ.ಎಂ. ಕಡೆಗೆ ಬರುವ ವಾಹನಗಳು ಬಿ.ಟಿ.ಎಂ. 29ನೇ ಮುಖ್ಯ ರಸ್ತೆಯ ಜಂಕ್ಷನ್ ಹತ್ತಿರ ಆಕ್ಸಾ ಕಂಪನಿ ಕಡೆಗೆ ಬಲ ತಿರುವು ಪಡೆಯುವುದನ್ನು ಮತ್ತು “ಯು” ತಿರುವು ಪಡೆಯುವುದನ್ನು ನಿಷೇಧಿಸಿ ಇದನ್ನು ದಿನಾಂಕ 02–02–2013 ರಿಂದ ಪ್ರಾಯೋಗಿಕವಾಗಿ ಜಾರಿಗೆ ತರಲಾಗಿತ್ತು.

ಮೇಲ್ಕಂಡಂತೆ ಬಲ ತಿರುವು ಮತ್ತು “ಯು” ತಿರುವು ನಿಷೇಧದಿಂದ ಸಂಚಾರವು ಸುಗಮವಾಗಿ ಸಾಗುತ್ತಿರುವುದು ಮತ್ತು ಸಂಚಾರದಲ್ಲಿನ ಒತ್ತಡ ಸಹ ತಿಳಿಯಾಗಿ ಸಾರ್ವಜನಿಕರು ಸರಾಗವಾಗಿ ಸಂಚರಿಸುತ್ತಿದ್ದಾರೆ. ಸುಗಮ ಸಂಚಾರಕ್ಕಾಗಿ ಹಾಗೂ ಸಂಚಾರ ಒತ್ತಡವನ್ನು ತಿಳಿಗೊಳಿಸುವ ಸಲುವಾಗಿ ಪ್ರಾಯೋಗಿಕವಾಗಿ ಜಾರಿಗೆ ತಂದಿದ್ದ ಬಲ ತಿರುವು ನಿಷೇಧ ಮತ್ತು “ಯು” ತಿರುವು ನಿಷೇಧ ಹಾಗೂ ಇನ್ನಿತರೆ ಸಂಚಾರ ಮಾರ್ಪಾಡುಗಳನ್ನು ಖಾಯಂ ಆಗಿ ಮುಂದುವರಿಸುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ 29ನೇ ಮುಖ್ಯ ರಸ್ತೆ ಜಂಕ್ಷನ್‌ನಲ್ಲಿ ಬಲ ತಿರುವು ಮತ್ತು “ಯು” ತಿರುವು ನಿಷೇಧ ಹಾಗೂ ಇನ್ನಿತರೆ ಸಂಚಾರ ಮಾರ್ಪಾಡು ಸಂಬಂಧ ಈ ಕೆಳಕಂಡಂತೆ ಮಾರ್ಪಾಡನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

1. ಬಿ.ಟಿ.ಎಂ. 100 ಅಡಿ ರಿಂಗ್ ರಸ್ತೆಯಲ್ಲಿ ಸಿಲ್ಕ್ ಬೋರ್ಡ್ ಜಂಕ್ಷನ್ ಕಡೆಯಿಂದ ಬರುವ ವಾಹನಗಳು ಬಿ.ಟಿ.ಎಂ. 29ನೇ ಮೈನ್ ಜಂಕ್ಷನ್‌ನಲ್ಲಿ “ಬಲ ತಿರುವು” ಮತ್ತು “ಯು” ತಿರುವು ಪಡೆಯುವುದನ್ನು ಕಡ್ಡಾಯವಾಗಿ ನಿಷೇಧಿಸಲಾಗಿದೆ.
2. ಈ ಜಂಕ್ಷನ್‌ನಲ್ಲಿ ಬಲ ತಿರುವು ಮತ್ತು “ಯು” ತಿರುವು ಪಡೆಯುತ್ತಿದ್ದವರು, ಈ ಜಂಕ್ಷನ್‌ನಿಂದ ಮುಂದೆ ಅರ್ಧ ಕಿ.ಮೀ. ಅಂತರದಲ್ಲಿರುವ ಬಿ.ಟಿ.ಎಂ. 16ನೇ ಮುಖ್ಯ ರಸ್ತೆ ಜಂಕ್ಷನ್‌ನಲ್ಲಿ “ಬಲ ತಿರುವು” ಮತ್ತು “ಯು” ತಿರುವು ಪಡೆಯುವ ಮೂಲಕ ಆಕ್ಸಾ ಕಂಪನಿ ಕಡೆಗೆ ಮತ್ತು ವರ್ತುಲ ರಸ್ತೆಯನ್ನು ಸೇರಲು ಅನುವು ಮಾಡಿಕೊಡಲಾಗಿದೆ.
3. ಸಾರ್ವಜನಿಕರ ಸುಗಮ ಸಂಚಾರದ ಹಿತದೃಷ್ಟಿಯಿಂದ ಆರ್.ಬಿ.ಐ. ಲೇಔಟ್ 1ನೇ ಮುಖ್ಯ ರಸ್ತೆ ಮತ್ತು ಭೈರಸಂದ್ರ 10ನೇ ಅಡ್ಡ ರಸ್ತೆಗಳಲ್ಲಿ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ಖಾಯಂ ಆಗಿ ಮುಂದುವರಿಸಲು ದಿನಾಂಕ 06–03–2013 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಜಾರಿಗೆ ತರಲು ಆದೇಶ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ,** ಐ.ಪಿ.ಎಸ್.
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**P.R. 251**
**SC - 100**

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಹೆಚ್‌ಡಿ 85 ಎಸ್‌ಎಸ್‌ಟಿ 2013, ಬೆಂಗಳೂರು, ದಿನಾಂಕ: 20–03–2013**

**ಸುತ್ತೋಲೆ**

2013ರ ಕರ್ನಾಟಕ ವಿಧಾನ ಸಭೆ ಚುನಾವಣೆಯು ದಿನಾಂಕ : **05–05–2013**ರಂದು ನಡೆಯಲಿದ್ದು ಚುನಾವಣೆ ಸಮಯದಲ್ಲಿ ಈ ಕೆಳಕಂಡ ಕ್ರಮಗಳನ್ನು ಚಾಚೂತಪ್ಪದೇ ಪಾಲಿಸತಕ್ಕದ್ದು.

1. ಜಿಲ್ಲಾಧಿಕಾರಿಗಳು ಜಿಲ್ಲಾ ಪೊಲೀಸ್ ಅಧೀಕ್ಷಕರುಗಳು ಜೊತೆಗೂಡಿ ಅವರವರ ಜಿಲ್ಲೆಗಳಲ್ಲಿನ ಸೂಕ್ಷ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳನ್ನು ಗುರುತಿಸಿ ಕೂಡಲೇ ಪಟ್ಟಿಯನ್ನು ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು.
2. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳಿಗೆ ಸೂಕ್ತ ಭದ್ರತಾ ವ್ಯವಸ್ಥೆಗಳನ್ನು ಮಾಡತಕ್ಕದ್ದು.
3. ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಮತಗಟ್ಟೆಗಳ ಭದ್ರತೆಯನ್ನು ಪೊಲೀಸ್ ಸಿಬ್ಬಂದಿಯಿಂದಲೇ ಮಾಡತಕ್ಕದ್ದು ಹಾಗೂ ಗೃಹ ರಕ್ಷಕ ದಳದ ಸಿಬ್ಬಂದಿಗಳನ್ನು ನೇಮಿಸಬಾರದು.
4. ಮೂರಕ್ಕಿಂತ ಹೆಚ್ಚು ಸಾಮಾನ್ಯ ಮತಗಟ್ಟೆಗಳು ಒಂದೇ ಸ್ಥಳದಲ್ಲಿದ್ದರೆ, ಅವುಗಳಿಗೆ ಬಂದೋಬಸ್ತ್ ನೀಡಲು ಕನಿಷ್ಠ ಒಬ್ಬ ಮುಖ್ಯ ಪೇದೆ ಹಾಗೂ ಅವರ ಜೊತೆ ಗೃಹ ರಕ್ಷಕದಳದ ಸಿಬ್ಬಂದಿ ಅಥವಾ ಪೊಲೀಸರನ್ನು ಒದಗಿಸುವುದು. ಗೃಹ ರಕ್ಷಕ ದಳದವರನ್ನು ಎಲ್ಲಾ ಸಾಮಾನ್ಯ ಮತಗಟ್ಟೆಗಳಲ್ಲಿ ನೇಮಿಸಲು ಕ್ರಮ ವಹಿಸುವುದು.

5. ಜಿಲ್ಲಾ ಪೊಲೀಸ್ ಅಧೀಕ್ಷಕರು ಅವಶ್ಯಕತೆಗೆ ತಕ್ಕಂತೆ ಸಂಚಾರಿ ದಳಗಳನ್ನು ರಚಿಸಬೇಕು. ಚುನಾವಣಾ ಪ್ರಕ್ರಿಯೆ ನಡೆಯುವಾಗ ಯಾವುದಾದರೂ ಮತಗಟ್ಟೆಯಲ್ಲಿ ಜನಸಂಚಾರ, ದಟ್ಟಣೆ ಅಥವಾ ಯಾವುದೇ ಅಹಿತಕರ ಘಟನೆ ನಡೆಯುವ ಪ್ರಸಂಗವುಂಟಾದಲ್ಲಿ ಈ ಸಂಚಾರಿ ದಳಗಳನ್ನು ನಿಯೋಜಿಸಿ ಅಂತಹ ಮತಗಟ್ಟೆಗಳಿಗೆ ಸೂಕ್ತ ಭದ್ರತೆ ನೀಡತಕ್ಕದ್ದು.

6. ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್, ಡಿವೈಎಸ್‌ಪಿ ಹಾಗೂ ಹೆಚ್ಚುವರಿ ಪೊಲೀಸ್ ಅಧೀಕ್ಷಕರುಗಳು ಇವರುಗಳು ತಮ್ಮ ಸ್ವಂತ ಊರು/ಜಿಲ್ಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದರೆ, ಅವರನ್ನು ಕೂಡಲೇ ಅಲ್ಲಿಂದ ಬೇರೆ ಕಡೆಗೆ ವರ್ಗಾವಣೆ ಮಾಡತಕ್ಕದ್ದು.

7. ಚುನಾವಣಾ ಪೂರ್ವದಲ್ಲಿ ಶಸ್ತ್ರಾಸ್ತ್ರ ಪರವಾನಗಿ ಹೊಂದಿರುವವರು ಶಸ್ತ್ರಾಸ್ತ್ರಗಳನ್ನು ತಕ್ಷಣ ಠೇವಣಿ ಇಡುವಂತೆ ನಿರ್ದೇಶಿಸುವುದು. ಈ ಸಂಬಂಧ ಸಂಪೂರ್ಣ ಮಾಹಿತಿ ಗಣಕಯಂತ್ರದಲ್ಲಿ ಲಭ್ಯವಿರುವಂತೆ ನೋಡಿಕೊಳ್ಳುವುದು.

8. ಚುನಾವಣಾ ವೇಳೆಯಲ್ಲಿ ಹಾಗೂ ಚುನಾವಣಾ ಪೂರ್ವದಲ್ಲಿ ಜಿಲ್ಲೆಯಲ್ಲಿರುವ ಛತ್ರ, ಸಂಘ–ಸಂಸ್ಥೆಗಳು ಹಾಗೂ ಇತ್ಯಾದಿಗಳ ಮೇಲೆ ಕಟ್ಟುನಿಟ್ಟಿನ ನಿಗಾ ವಹಿಸುವುದು ಹಾಗೂ ಅವರುಗಳ ಕೆಲಸ ನಿರ್ವಹಣೆ ಮೇಲೂ ಸಹ ಗುಪ್ತಚರ ಅಧಿಕಾರಿಗಳಿಂದ ಮಾಹಿತಿ ತರಿಸಿ ನಿಗಾ ವಹಿಸುವುದು.

9. ಚುನಾವಣಾ ಪ್ರಕ್ರಿಯೆಯಲ್ಲಿ ಅಡಚಣೆ ಅಥವಾ ಯಾವುದೇ ತರಹದ ತೊಂದರೆಯನ್ನು ಉಂಟು ಮಾಡುವ ಸಾಧ್ಯತೆ ಇರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ತೀವ್ರ ನಿಗಾ ವಹಿಸುವುದು. ಅದೇ ರೀತಿ ವಿವಿಧ ಕಾಯ್ದೆ/ಕಾನೂನಿನಡಿಯಲ್ಲಿ ಕೆಲವರನ್ನು ಮುಂಜಾಗ್ರತಾ ಕ್ರಮವಾಗಿ ಬಂಧಿಸಿ ಕ್ರಮ ಕೈಗೊಳ್ಳುವುದು (Preventive Detention), ಅವಶ್ಯವಿದ್ದಲ್ಲಿ ಗಡೀಪಾರು ಮಾಡುವುದು.

10. ಜಿಲ್ಲೆಯಲ್ಲಿರುವ ಸಮಾಜಘಾತುಕ ವ್ಯಕ್ತಿಗಳ ಮೇಲೆ ವಿವಿಧ ಕಾನೂನಿನಡಿಯಲ್ಲಿ ಜಾರಿಯಾಗದ ಬಾಕಿ ಇರುವ ಜಾಮೀನುರಹಿತ ವಾರಂಟ್‌ನ್ನು ಜಾರಿ ಮಾಡಿ ಸೂಕ್ತ ಕ್ರಮ ಜರುಗಿಸುವುದು.

11. ಚುನಾವಣಾ ಸಮಯದಲ್ಲಿ ಗಡಿ ಪ್ರದೇಶಗಳನ್ನು ಕಡ್ಡಾಯವಾಗಿ ಸೀಲ್ ಮಾಡುವುದು.

12. ಗಡಿ ಪ್ರದೇಶಗಳಲ್ಲಿ ಚೆಕ್‌ಪೋಸ್ಟ್‌ನ್ನು ಸ್ಥಾಪಿಸಿ ಗಡಿಪ್ರದೇಶಗಳಲ್ಲಿ ಓಡಾಡುವ ವಾಹನಗಳ ಹಾಗೂ ಜನರ ಚಲನವಲನಗಳ ಮೇಲೆ ಕಣ್ಣಾವಲಿರಿಸುವುದು.

13. ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ಒಂದು ಕಂಟ್ರೋಲ್ ರೂಂನ್ನು ಸ್ಥಾಪಿಸಿ ಅದರ ದೂರವಾಣಿ ಸಂಖ್ಯೆ ಮತ್ತು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯ ಹೆಸರು, ಹುದ್ದೆ, ದೂರವಾಣಿ ಸಂಖ್ಯೆ ಮೊಬೈಲ್ ಸಂಖ್ಯೆ ಬಗ್ಗೆ ಚುನಾವಣಾ ಆಯೊಗಕ್ಕೆ ಹಾಗೂ ಸರ್ಕಾರಕ್ಕೆ (ಒಳಾಡಳಿತ ಇಲಾಖೆ) ವಿವರಗಳನ್ನು ಕಳುಹಿಸತಕ್ಕದ್ದು. ಸದರಿ ಕಂಟ್ರೋಲ್ ರೂಂನಲ್ಲಿ ಪ್ರತ್ಯೇಕವಾದ ದೂರು ಅರ್ಜಿ ವಹಿಯನ್ನು ನಿರ್ವಹಿಸತಕ್ಕದ್ದು. ಯಾರಾದರೂ ದೂರು ಸಲ್ಲಿಸಿದಲ್ಲಿ 24 ಗಂಟೆಗಳೊಳಗಾಗಿ ಅವರಿಗೆ ಉತ್ತರ ನೀಡತಕ್ಕದ್ದು. ಪ್ರತಿ ವಾರದ ಕೊನೆಯಲ್ಲಿ ಸ್ವೀಕರಿಸಿದ ಅರ್ಜಿಗಳು ಹಾಗೂ ವಿಲೇಯಾದ ಅರ್ಜಿಗಳ ಬಗ್ಗೆ ಅಂಕಿ–ಅಂಶಗಳನ್ನು ಜಿಲ್ಲಾಧಿಕಾರಿ ಹಾಗೂ ಚುನಾವಣಾ ವೀಕ್ಷಕರಿಗೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ದೂರು ಅರ್ಜಿಗೆ ಸಂಬಂಧಿಸಿದಂತೆ ಕ್ರಮ ಕೈಗೊಳ್ಳದೇ ಇದ್ದಲ್ಲಿ ಅದನ್ನು ರಾಜ್ಯ ಚುನಾವಣಾ ಆಯೋಗವು ಗಂಭೀರವಾಗಿ ಪರಿಗಣಿಸುವುದು.

14. ಚುನಾವಣಾ ವೀಕ್ಷಕರಿಗೆ ಸೂಕ್ತ ರಕ್ಷಣೆ ನೀಡಲು ಕ್ರಮ ಜರುಗಿಸುವುದು. ಅವರು ತಂಗಿರುವ ಸ್ಥಳದಲ್ಲಿ ಅವರಿಗೆ ರಕ್ಷಣೆ ಹಾಗೂ ಸ್ವತಃ ಅವರಿಗೆ ಕನಿಷ್ಟ ಒಬ್ಬ ಅಂಗರಕ್ಷಕನನ್ನು ಒದಗಿಸುವುದು.

15. ಚುನಾವಣಾ ವೇಳೆಯಲ್ಲಿ ಕಳ್ಳಭಟ್ಟಿ ಸಾರಾಯಿ, ಶೇಂದಿ ಹಾಗೂ ಸಾರಾಯಿ ಮಾರಾಟ ಆಗದಂತೆ ನೋಡಿಕೊಳ್ಳತಕ್ಕದ್ದು. ಜೊತೆಗೆ ಗಾಂಜಾ ಹಾಗೂ ನಾರ್ಕೊಟಿಕ್ ಡ್ರಗ್ಸ್‌ಗಳ ಮಾರಾಟ, ಕಳ್ಳಸಾಗಾಣೆ ಮೇಲೆ ತೀವ್ರ ನಿಗಾ ವಹಿಸುವುದು ಹಾಗೂ ಕಠಿಣ ಕ್ರಮ ತೆಗೆದುಕೊಳ್ಳುವುದು. ಚುನಾವಣಾ ವೇಳೆ ಹದ್ದುಬಸ್ತಿನ ಹೊರಗಡೆಯೂ ಸಹ ವಾಹನಗಳ ಹಾಗೂ ಜನರ ಚಲನವಲವಗಳ ಬಗ್ಗೆ ಸೂಕ್ಷ್ಮ ನಿಗಾ ವಹಿಸತಕ್ಕದ್ದು.

16. ಕ್ರಿಮಿನಲ್ ಅಪರಾಧದ ಹಿನ್ನೆಲೆಯುಳ್ಳ ವ್ಯಕ್ತಿಗಳು, ಗೂಂಡಾ ಚಟುವಟಿಕೆಗಳಲ್ಲಿ ಭಾಗಿಯಾಗಿರುವವರು, ಸಮಾಜಘಾತುಕ ವ್ಯಕ್ತಿಗಳು, ವೃತ್ತಿನಿರತ ಮಾಫಿಯಾಗಳ ಬಗ್ಗೆ ತೀವ್ರ ನಿಗಾ ಇಡುವುದು.

17. ನಕ್ಸಲ್ ಪೀಡಿತ ಜಿಲ್ಲೆಗಳಲ್ಲಿ ಸೂಕ್ಷ್ಮ ಸ್ಥಳಗಳಲ್ಲಿ ಕೆಎಸ್‌ಆರ್‌ಪಿ ತುಕಡಿಯನ್ನು ನಿಯೋಜಿಸುವುದು ಹಾಗೂ ಗುಪ್ತದಳದವರು ಅಲ್ಲಿಯ ಜನರ ಹಾಗೂ ಅಪರಿಚಿತ ವ್ಯಕ್ತಿಗಳ ಚಲನವಲನದ ಮೇಲೆ ಸೂಕ್ಷ್ಮ ನಿಗಾ ವಹಿಸತಕ್ಕದ್ದು. ಜೊತೆಗೆ ಯಾರೂ, ಮತದಾನ ಚಲಾಯಿಸಲು ಬಂದ ಮತದಾರರಿಗೆ ಅಡ್ಡಿಪಡಿಸದ ಹಾಗೆ ನೋಡಿಕೊಳ್ಳತಕ್ಕದ್ದು.

18. ಚುನಾವಣೆ ಮುಗಿಯುವವರಗೆ ಯಾವುದೇ ರೌಡಿಶೀಟ್‌ನ್ನು ಮುಕ್ತಾಯ ಮಾಡಬಾರದು.

19. ಚುನಾವಣೆ ಸಂಬಂಧ ಪ್ರಮುಖ ಕಾರ್ಯಕ್ರಮಗಳ ವಿಡಿಯೋ ತೆಗೆದುಕೊಳ್ಳುವುದು.

ಈ ಸೂಚನೆಗಳನ್ನು ಯಾವುದೇ ಲೋಪಗಳಿಗೆ ಅವಕಾಶ ನೀಡದಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ವಿ. ಉಮೇಶ್, ಐ.ಎ.ಎಸ್.**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ

P.R. 252
SC - 150

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ, ಉಪ ವಿಭಾಗ-1, ಬಳ್ಳಾರಿ

### ಪ್ರಕಟಣೆ

**ಸಂ : ಕಾಅಬ-1/ಕಾನಪ/ಸಿಆರ್-46/2013/3358, ದಿನಾಂಕ : 20-03-2013.**

**ಅರ್ಜಿದಾರರು**

1. ಶ್ರೀಮತಿ ಹಿಂದುಮತಿ @ ಸುನಂದ ಗಂಡ ಮಾರುತಿ ನಾಯ್ಕ ವಯಸ್ಸು 30 ವರ್ಷ, [ಮೃತನ ಹೆಂಡತಿ]
2. ಕುಮಾರಿ ವರ್ಷ ತಂದೆ ಮಾರುತಿ ನಾಯ್ಕ ವಯಸ್ಸು 15 ವರ್ಷ, [ಮೃತನ ಮಗಳು]
3. ಕುಮಾರಿ ಅಶ್ವಿನಿ ತಂದೆ ಮಾರುತಿ ನಾಯ್ಕ ವಯಸ್ಸು 13 ವರ್ಷ, [ಮೃತನ ಮಗಳು]
4. ಮಿರ್ಜಲಾ ತಂದೆ ಮಾರುತಿ ನಾಯ್ಕ ವಯಸ್ಸು 10 ವರ್ಷ [ಮೃತನ ಮಗಳು]
5. ಸಮರ್ಥ ತಂದೆ ಮಾರುತಿ ನಾಯ್ಕ ವಯಸ್ಸು 04 ವರ್ಷ [ಮೃತನ ಮಗ]

**ವಾಸ :** ವರಗಾವ್ ನಾಯ್ಕುವಾಡ, ದತ್ತೆ ಅಂಚೆ ಚಂದಗಡ್ ತಾಲ್ಲೂಕು ಕೊಲ್ಲಪುರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಸೈಯದ್ ಪೀರ ಲಿಂಗೆಡರ್ಕ್ರೋಪ್ ತಂದೆ ಇಮಾಮ್ ಸಾಬ್ ಲಿಂಗೆಡರ್ಕ್ರೋಪ್, ಗೂಡ್ಸ್ ವಾಹನ ಮಾಲೀಕರು, ನಂ. ಜಿ.ಎ-03/ಕೆ2568
   # 354/10, ಕೋರ್ಲಿಂ, ಮಾಪುಸ ಗೋವಾ ಅಂಚೆ, ಬರ್ ಡೇಜ್-ನಾರ್ಥ, ಗೋವಾ-403507.
2. ದಿ. ಬ್ರಾಂಚ್ ಮ್ಯಾನೇಜರ್, ಮೆ॥ ಬಜಾಜ್ ಅಲೈಯನ್ಸ್ ಜನರಲ್ ಇನ್ಸೂರೇನ್ಸ್ ಕಂಪನಿ ಲಿಮಿಟೆಡ್, ಡಬಲ್ ರೋಡ್ ಬಳ್ಳಾರಿ.

ಈ ಮೇಲೆ ತಿಳಿಸಿದ (1 ರಿಂದ 5) ಅರ್ಜಿದಾರರು ಮೃತನ ವಾರಸುದಾರರಾಗಿದ್ದು, ಮೃತ ಮಾರುತಿ ನಾಯ್ಕ 1ನೇ ಪ್ರತಿವಾದಿಗಳ ವಾಹನದಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದರೆಂದು ದಿನಾಂಕ : 30-01-2013 ಮೃತಪಟ್ಟಿದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧೀಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ಉಪ ವಿಭಾಗ-1, ಬಳ್ಳಾರಿ.

**P.R. 253**
**SC - 5**

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

**ಸಂ : ಕಾನಪ/ಡಬ್ಲ್ಯೂಸಿಎ/ಸಿಆರ್-7/2013, ದಿನಾಂಕ : 20-03-2013.**

**ಅರ್ಜಿದಾರರು**

ಶ್ರೀಮತಿ ಶಿಲ್ಪ ಕೊಂ ರತ್ನಾಕರ್, ಎಸ್.ಎಸ್. ಬನ್ನೂರು ಗ್ರಾಮ ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

**ಪ್ರತಿವಾದಿಗಳು**

ಆಕರ್ಷ ಪ್ರಾಪರ್ಟಿಸ್,
ಯೂನಿಟ್ ರಾಯಲ್ ಅರ್ಕಿಡ್ ಹೋಟೆಲ್, ವಿನಾಯಕ ಟಾಕೀಸ್ ಎದುರು, ಬಿ.ಹೆಚ್. ರಸ್ತೆ, ಶಿವಮೊಗ್ಗ.

ಅರ್ಜಿದಾರರು ದಿ : ರತ್ನಾಕರ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತನಾಗಿದ್ದಾಗ ದಿನಾಂಕ : 23-11-2012 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಂ.ಪಿ. ವಿಶ್ವನಾಥ್,**
ಕಾರ್ಮಿಕ ಪರಿಹಾರ ಆಯುಕ್ತರು,
ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**P.R. 254**
**SC - 5**

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

**ಸಂ : ಕಾನಪ/ಡಬ್ಲ್ಯೂಸಿಎ/ಸಿಆರ್–9/2013, ದಿನಾಂಕ : 20–03–2013.**

**ಅರ್ಜಿದಾರರು**

ಶ್ರೀಮತಿ ಸುಧಾ ಕೊಂ ಧರ್ಮಲಿಂಗಮ್,
38 ವರ್ಷ, ಲೋಯರ್ ಹುತ್ತಾ, ಬಿ.ಹೆಚ್. ರಸ್ತೆ, ಭದ್ರಾವತಿ.

**ಪ್ರತಿವಾದಿಗಳು**

1. ದೇವರಾಜ್, ಬಿನ್ ಚಿನ್ನಯ್ಯ,
   ಲಾರಿ ಡ್ರೈವರ್, ಲಾರಿ ಸಂ. ಕೆ.ಎ–16–4408, ಕುರುಬರ ಬೀದಿ, ಹಳೆ ಲಕ್ಕವಳ್ಳಿ, ತರಿಕೆರೆ.
2. ಪಿಲ್ಲಿಯಾರ್ ಕೆ. ಬಿನ್ ಕೃಷ್ಣಪ್ಪ,
   ಲಾರಿ ಮಾಲೀಕರು, ಲಾರಿ ಸಂ. ಕೆಎ–16–4408, ಶಂಕರ್ ಗ್ಯಾಸ್ ಗೋಡೌನ್ ಎದುರು, ಲೋಯರ್ ಹುತ್ತಾ, ಬಿ.ಹೆಚ್. ರಸ್ತೆ, ಭದ್ರಾವತಿ.
3. ಶ್ರೀರಾಮ್ ಜನರಲ್ ಇನ್ಸೂರೆನ್ಸ್ ಕಂ. ಲಿ.,
   ಇ–8EPIP, RIICO, ಸೀತಾಪುರ, ಜೈಪುರ, ರಾಜಸ್ತಾನ–302022.

ಅರ್ಜಿದಾರರು ದಿ॥ ಶಿವಕುಮಾರ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತನಾಗಿದ್ದಾಗ ದಿನಾಂಕ : 23–04–2012 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಂ.ಪಿ. ವಿಶ್ವನಾಥ್,**
ಕಾರ್ಮಿಕ ಪರಿಹಾರ ಆಯುಕ್ತರು,
ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**P.R. 255**
**SC -5**

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

**ಸಂ : ಕಾನಪ/ಡಬ್ಲ್ಯೂಸಿಎ/ಸಿಆರ್–6/2013, ದಿನಾಂಕ : 20–03–2013.**

**ಅರ್ಜಿದಾರರು**

1. ಶ್ರೀಮತಿ ಹಸೀನಾ ಕೊಂ ದಿ॥ ಮಹ್ಮದ್ ಅನ್ವರ್
2. ಬೀಬಿ ಅಮೀನ್ ಬಿನ್ ದಿ॥ ಮಹ್ಮದ್ ಅನ್ವರ್
3. ಶಫಿನಾಜ್ ಬಿನ್ ಮಹ್ಮದ್ ಅನ್ವರ್, ಮಾರ್‍ನಾಮಿ ಶೆಡ್, ಬಾರ್ ಲೈನ್ ಮಸೀದಿ ಹತ್ತಿರ, ಶಿವಮೊಗ್ಗ.

**ಪ್ರತಿವಾದಿಗಳು**

1. ಶಮೀರ್ ಪಾಷ ಬಿನ್ ರಿಯಾಜ್ ಅಹ್ಮದ್, ಮೆಕ್ಯಾನಿಕ್,
   ಮಂಜುನಾಥ ಬಡಾವಣೆ, ಚಾನಲ್ ಹತ್ತಿರ, ಶಿವಮೊಗ್ಗ.
   ಲಾರಿ ಮಾಲೀಕರು, ಲಾರಿ ಸಂ. ಕೆಎ–06–443.
2. ವ್ಯವಸ್ಥಾಪಕರು,
   ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ.,
   1ನೇ ತಿರುವು, ಗಾರ್ಡನ್ ಏರಿಯಾ, ಶಿವಮೊಗ್ಗ.

ಅರ್ಜಿದಾರರು ದಿ॥ ರಜಾಕ್ ಅಹ್ಮದ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತವಾಗಿದ್ದಾಗ ದಿನಾಂಕ : 25–11–2012 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಂ.ಪಿ. ವಿಶ್ವನಾಥ್,**
ಕಾರ್ಮಿಕ ಪರಿಹಾರ ಆಯುಕ್ತರು,
ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**P.R. 256**
**SC - 5**

## PUBLIC NOTICE

### XINDIA INTERNATIONAL CEMENTS LIMITED

### The Estate, 10th Floor, 121, Dickenson Road, Bangalore-560042

Notice is hereby given that the members of Xindia International Cements Limited at the Extra-ordinary General Meeting of the Company held on 9-4-2013 at its registered office have passed the following Special Resolution to wind up the above company voluntarity :

"RESOLVED THAT as per the provisions of section 484 of the companies Act 1956 and other applicable provisions if any, members of the Company be and hereby accord their consent to wind up the Company by way of Members' Voluntary Winding up.

RESOLVED FURTHER THAT as per the provisions of section 486 of the Companies Act 1956, the winding up shall be deemed to commence from the date of passing of this resolution.

RESOLVED THAT any of the directors of the company be and is hereby authorised to verify, modify, sign, file any related document with the statutory authorities and to do all the necessary deeds and actions relating to winding up of the company"

For and on behalf of Xindia International Cements Limited.

Alex P.J. (Director)

K.J. Kuruvilla (Director)

For XINDIA INTERNATIONAL CEMENTS LIMITED
**MADHWESH. K.**
Liquidator

Date : 9-4-2013
Place : Bangalore

## FORM NO. 151

### Member's Voluntary Winding Up

### Notice of appointment of Liquidator pursuant to section 516

### (Pursuant to section 516 of the Companies Act 1956 read with Rule 315 of Company Court Rules 1959)

| | |
|---|---|
| Name of the Company | Xindia International Cements Limited |
| Nature of Business | Manufacturing, Processing etc of cements |
| Address of the Registered Office | The Estate, 10th Floor, 121, Dickenson Road, Bangalore-560 042 |
| Name of the Liquidator | K. Madhwesh |
| Address of Liquidator | No. 180, 31st Cross, 21st Main, Jayanagar 4th Block, Bangalore-560001 |
| Date of appointment | 9-4-2013 |
| By whom appointed | By the members of the company through their special resolution passed at their Extra-ordinary General Meeting held on 9-4-2013 |

For XINDIA INTERNATIONAL CEMENTS LIMITED
**MADHWESH. K.**
Liquidator

**P.D. 56**

## ಕಂದಾಯ ಸಚಿವಾಲಯ

### ಅಧಿಸೂಚನೆ

### ನಮೂನೆ–29

### 68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96.

### ಸಂಖ್ಯೆ : ಆರ್‌ಡಿ 125 ಎಲ್‌ಜಿಕೆ 2012, ಬೆಂಗಳೂರು, ದಿನಾಂಕ : 22–03–2013

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ: 06–12–2012ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/391/71/11–12, ದಿನಾಂಕ: 22–10–2012 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ 'ಬಿ' ಖರಾಜು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲಾತಿ ಹಾಗೂ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಜಿಲ್ಲೆ ಇವರ ವರದಿ ಮೇರೆಗೆ ಪರಿಶೀಲಿಸಿದ ನಂತರ 'ಬಿ' ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | | |
|---|---|---|
| **ಜಮೀನು ಇರುವ ಗ್ರಾಮ** | : | ವಾಪಸಂದ್ರ ಗ್ರಾಮ |
| **ತಾಲ್ಲೂಕು** | : | ಚಿಕ್ಕಬಳ್ಳಾಪುರ ತಾಲ್ಲೂಕು |

| | | |
|---|---|---|
| ಜಿಲ್ಲೆ | : | ಚಿಕ್ಕಬಳ್ಳಾಪುರ ಜಿಲ್ಲೆ |
| ಸದರಿ ಭಾಗದ ವರ್ಣನೆ | : | 'ಬಿ' ಖರಾಬು ಜಮೀನು |
| ಸರಿ ಸುಮಾರು ವಿಸ್ತೀರ್ಣ | : | ವಾಪಸಂದ್ರ ಗ್ರಾಮದ ಸ.ನಂ. 185ರಲ್ಲಿ 0–05 ಗುಂಟೆ ವಿಸ್ತೀರ್ಣದ ಜಮೀನು. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ದಾರಿ ಅಥವಾ ಅದರ ಭಾಗ | : | ವಾಪಸಂದ್ರ ಗ್ರಾಮ |
| ಮೇರೆಗಳು | : | **ಪೂರ್ವಕ್ಕೆ :** ತೋಟಗಾರಿಕೆ ಇಲಾಖೆ ಕಾಂಪೌಂಡ್<br>**ಪಶ್ಚಿಮಕ್ಕೆ :** ರಸ್ತೆ<br>**ಉತ್ತರಕ್ಕೆ :** ಉಪವಿಭಾಗಧಿಕಾರಿಗಳ ಕಛೇರಿ<br>**ದಕ್ಷಿಣಕ್ಕೆ :** ರಸ್ತೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1).

**P.R. 258**
**SC - 25**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of tax applicable on certain ready to fry food products - reg.

**Ref:** Application dated: 04-12-2012 of M/s Innovative Foods Limited, Bangalore. TIN No.-29770750029.

In the application cited above of M/s. Innovative Foods Limited, No.448/A, 1st Floor, 2nd Cross, 9th Main, HAL 3rd Stage, Bangalore-560 075 has sought clarification regarding the rate of tax applicable on certain ready to fry food products.

2. Section 59(4) of the Karnataka Value Added Tax Act , 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. The application made is examined and found that the clarification requested by the applicant is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.168/12-13, DATED 21-03-2013**

It is clarified that 'Ready to fry food products namely, Vegetable samosa, Cheese samosa, Vegetble fingers, Vegetable cutlet, Vegetable Burger patty, Vegetable Nuggets, Vegetable Spring roll, Crunchy Veggie strips Rogini curry, Veg. Zinger, Veg Snacker Patty and Fried Vegetable Patty' that are to be stored in frozen condition before use are liable to tax at 14.5% from 01-08-2012 under Section 4(1)(b)(iii) of the Karnataka Value Added Tax Act,2003.

**YOGENDRA TRIPATHI,**
Commissioner of Commercial Taxes,
(Karnataka), Bangalore

**P.R. 259**
**SC - 100**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

### ಉಪ ಆಯುಕ್ತರು (ಭೂಸ್ವಾಧೀನ) ರವರ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ಮೊದಲನೇ ಮಹಡಿ, ಹೊಸ ಕಟ್ಟಡ (ಮೇಜರ್ ರೋಡ್ಸ್), ಅನೆಕ್ಸ್ ಬಿಲ್ಡಿಂಗ್ ಹಿಂಭಾಗ, ಎನ್.ಆರ್. ವೃತ್ತ, ಬೆಂಗಳೂರು–02

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ : ಎಲ್‌ಎಕ್ಯೂ/ಸಿಆರ್/09/2011–12, ದಿನಾಂಕ : 31–12–2012.**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್, ಸಂಖ್ಯೆ : 165, ಗಣೇಶಮಂದಿರ (ಹಳೆ ವಾರ್ಡ್‌ನಂ. 55) ಮತ್ತು ವಾರ್ಡ್ ನಂ. 182 ಪದ್ಮನಾಭನಗರದಲ್ಲಿ ಬರುವ (ಹಳೆ ವಾರ್ಡ್ ನಂ. 56) ಕಿತ್ತೂರುರಾಣಿ ಚೆನ್ನಮ್ಮ ವೃತ್ತದಲ್ಲಿ ಮೇಲುಸೇತುವೆ ನಿರ್ಮಾಣ ಕಾಮಗಾರಿಗಾಗಿ ಪ್ರಸ್ತಾಪಿಸಿರುವ ಸ್ವತ್ತುಗಳಲ್ಲಿನ 28999.0 ಚ.ಅಡಿ ಪ್ರದೇಶವನ್ನು ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ ಕಲಂ 1894 ರ 4(1) ರ ಅಧಿಸೂಚನೆಯನ್ನು ದಿನಾಂಕ : 01–12–2011 ರಂದು ಹೊರಡಿಸಿದ್ದು. ಅದು ಕರ್ನಾಟಕ ರಾಜ್ಯ ಪತ್ರದ ಭಾಗ–3, ಪುಟ ಸಂಖ್ಯೆ : 4026 ರಿಂದ 4033 ರವರೆಗೆ

ಪ್ರಕಟವಾಗಿರುತ್ತದೆ. ಈ ಪ್ರಕಟಣೆಯಲ್ಲಿ ಪ್ರಕಟಿಸಿರುವ 28,999.0 ಚ.ಅಡಿಗೆ ಬದಲಾಗಿ 28,678.26 ಚ.ಅಡಿ ಎಂದು, ಓದಿಕೊಳ್ಳಬೇಕೆಂದು ಮಾಡಿದ ತಿದ್ದುಪಡಿಯಾಗಿರುತ್ತದೆ. ಇನ್ನುಳಿದಂತೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

| 4(1) ಗೆಜೆಟ್ ಕ್ರಮ ಸಂಖ್ಯೆ | 4(1) ಪ್ರಕಟಣೆಯಲ್ಲಿ ಪ್ರಕಟವಾದ ವಿಸ್ತೀರ್ಣ (ಚ.ಅಡಿಗಲ್ಲಿ) | ತಿದ್ದುಪಡಿಯಂತೆ ಓದಿಕೊಳ್ಳಬೇಕಾದ ವಿಸ್ತೀರ್ಣ (ಚ.ಅಡಿ.ಗಳಲ್ಲಿ) |
|---|---|---|
| 2 | 88.89 | 93.43 |
| 3 | 189.33 | 193.53 |
| 4 | 224.98 | 225.50 |
| 5 | 273.63 | 323.67 |
| 6 | 803.40 | 783.61 |
| 7 | 359.21 | 361.67 |
| 8 | 85.26 | 75.34 |
| 9 | 127.12 | 118.40 |
| 10 | 23.89 | 21.52 |
| 30 | 14,808.19 | 14,446.81 |

**ದಿನಾಂಕ : 31–12–2012**
**ಸ್ಥಳ : ಬೆಂಗಳೂರು**
**P.D. 54**

**ಉಪ ಆಯುಕ್ತರು (ಭೂಸ್ವಾಧೀನ)**
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

## ಪಟ್ಟಣ ಪಂಚಾಯತ ಕಾರ್ಯಾಲಯ, ಮುಂಡಗೋಡ (ಉ.ಕ)

### ಸೂಚನಾ ಫಲಕ

ಮಾಹಿತಿ ಹಕ್ಕು ಕಾಯ್ದೆ 2005 ಪ್ರಕರಣ 5(1)ರನ್ವಯ ಮುಂಡಗೋಡ ಪಟ್ಟಣ ಪಂಚಾಯತಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಪ್ರಾಧಿಕಾರಗಳನ್ನು ಪರೀಷ್ಕರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| ಅ. ನಂ. | ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು | ಸಂಬಂಧಪಟ್ಟ ಶಾಖೆ | ಕಛೇರಿ ದೂರವಾಣಿ ಸಂಖ್ಯೆ |
|---|---|---|---|---|
| 1 | ಶ್ರೀಮತಿ ಎಸ್ಟೆಲ್ಲಾ. ಎ. ಡಿಸೋಜಾ, ದ್ವಿ.ದ. ಸಹಾಯಕರು, ಮೊ : 9845881062 | ಶ್ರೀಮತಿ ಮಂಚಲಾ ಪಿ. ಶೇಟ, ಸಮುದಾಯ ಸಂಘಟಕರು ಮೊ : 9739719078 | ಪಟ್ಟಣ ಪಂಚಾಯತಕ್ಕೆ ಸಂಬಂಧಪಟ್ಟ ಯಾವತ್ತೂ ಸಂಪೂರ್ಣ ಮಾಹಿತಿ ಒದಗಿಸುವುದು | 08301–222127 |

ಮೇಲ್ಮನವಿ ಪ್ರಾಧಿಕಾರ
**ಶ್ರೀ ಗಿರೀಶ ಟಿ.ಎಸ್.**
ಮುಖ್ಯಾಧಿಕಾರಿ,
ಪಟ್ಟಣ ಪಂಚಾಯತ ಮುಂಡಗೋಡ (ಉ.ಕ.)

**P.D. 55**
**SC - 10**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ

### ಪ್ರಕಟಣೆ

**ಸಂ : ಕಾಅಬ–1/ಕಾನಪ/ಸಿಆರ್–26/2013/3215, ದಿನಾಂಕ : 15–2–2013.**

**ಅರ್ಜಿದಾರರು**

1. ಶ್ರೀ ತಲವಾರ್ ಚಂದ್ರಪ್ಪ ತಂದೆ ದಿ॥ ಲಿಂಗಪ್ಪ ವಯಸ್ಸು 44 ವರ್ಷ (ಮೃತನ ತಂದೆ)
2. ಶ್ರೀಮತಿ ರೇಣುಕಮ್ಮ ಗಂಡ ತಲವಾರ್ ಚಂದ್ರಪ್ಪ ವಯಸ್ಸು 40 ವರ್ಷ ಗೃಹಣಿ (ಮೃತನ ತಾಯಿ)

ವಾಸ : ಕೊಂಡನಾಯಕನಹಳ್ಳಿ ವಾರ್ಡ್ ನಂ.–8, ಹೊಸಪೇಟೆ

**ವಿರುದ್ಧ**

**ಪ್ರತಿವಾದಿಗಳು**

1. ಹಿಂದಲಮನಿ ಚಿದನಂದ ತಂದೆ ದಿ॥ ಹಿಂದಲಮನಿ ಪಕ್ಕೀರಪ್ಪ, ಟ್ರಾಕ್ಟರ್ ಮಾಲೀಕರು ಸಂಖ್ಯೆ : ಕೆಎ–35/ಟಿ.ಕ್ಯೂ–1682 ಮತ್ತು ಟ್ರೇಲರ್ ಸಂಖ್ಯೆ : ಕೆಎ–35/ಟಿ.ಎ–1683, ಚಾಸಿಸ್ ನಂ. ಡಿ.ಎ.ಇ.ಡಬ್ಲ್ಯೂ–091250

   ವಾಸ : ಕೊಂಡನಾಯಕನಹಳ್ಳಿ ಗ್ರಾಮ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ,
2. ದಿ. ಡಿವಿಜಿನಲ್ ಮ್ಯಾನೇಜರ್, ಮೆ॥ ನ್ಯಾಷಿನಲ್ ಇನ್ಯೂರೇನ್ಸ್ ಕಂಪನಿ ಲಿಮಿಟೆಡ್, ಅರ್ಜುನ್ ಆಟೋ ಏಜೆನ್ಸಿ, ಮುಖ್ಯ ರಸ್ತೆ, ಪಾರ್ವತಿ ನಗರ ಬಳ್ಳಾರಿ.

ಈ ಮೇಲೆ ತಿಳಿಸಿದ (1 ಮತ್ತು 2) ಅರ್ಜಿದಾರರು ಮೃತನ ವಾರಸುದಾರರಾಗಿದ್ದು, ಮೃತ ತಲವಾರ್ ತಾಯಪ್ಪ ತಂದೆ ತಲವಾರ್ ಚಂದ್ರಪ್ಪ 1ನೇ ಪ್ರತಿವಾದಿಗಳ ವಾಹನದಲ್ಲಿ ಕೂಲಿಯಾಗಿ ಕೆಲಸ ಮಾಡುತ್ತಿದ್ದರೆಂದು ದಿನಾಂಕ : 13–01–2013 ರಂದು ತೀವ್ರ ಗಾಯಗಳಿಗೀಡಾಗಿ ಮೃತಪಟ್ಟಿದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧಿಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ಉಪ ವಿಭಾಗ–1, ಬಳ್ಳಾರಿ

P.R. 201

## ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಮಮಇ 170 ಎಸ್‌ಜೆಡಿ 2012, ದಿನಾಂಕ : 25–2–2013.**

ಶ್ರೀ ಕೆ.ಹೆಚ್. ಓಬಳಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಳಗಾವಿ ಇವರಿಗೆ ಸಹಾಯಕ ನಿರ್ದೇಶಕರ ವೃಂದದ ದಿನಾಂಕ : 26–12–1995 ರಂದು ಇದ್ದಂತೆ ಜೇಷ್ಠತಾರ್ಹತೆಯನ್ನು ನಿಗದಿಪಡಿಸಿದ ತತ್ಪರಿಣಾಮವಾಗಿ ಇವರ ಹೆಸರನ್ನು ಜೇಷ್ಠತಾ ಕ್ರಮ ಸಂಖ್ಯೆ: 24ರ ನಂತರ ಜೇಷ್ಠತಾ ಕ್ರಮ ಸಂಖ್ಯೆ : 24 "ಎ" ಎಂದು ಸೇರ್ಪಡಿಸಿ ವಾಸ್ತವ ಮುಂಬಡ್ತಿ ದಿನಾಂಕಕ್ಕೆ ಸಂರಕ್ಷಿಸಿ ಅಧಿಸೂಚನೆ ಸಂಖ್ಯೆ : ಮಮಇ 170 ಎಸ್‌ಜೆಡಿ 2012 ದಿನಾಂಕ : 29–11–2012 ರಲ್ಲಿ ಕರಡು ಅಧಿಸೂಚನೆಯನ್ನು ಪ್ರಕಟಿಸಿ ಬಾದಿತರಿಂದ ಆಕ್ಷೇಪಣೆಗಳನ್ನು ಆಹ್ವಾನಿಸುತ್ತಾ 15 ದಿನಗಳಲ್ಲಿ ತಮ್ಮ ಲಿಖಿತ ಅಹವಾಲುಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಪ್ರಕಟಿಸಲಾಗಿತ್ತು.

ಅದಕ್ಕೆ ಅನುಸಾರವಾಗಿ ನಿಗದಿತ ಅವದಿಯೊಳಗಾಗಿ ಸ್ವೀಕೃತಗೊಂಡಿದ್ದ ಆಕ್ಷೇಪಣೆಗಳನ್ನು ಪರಿಶೀಲಿಸಲಾಯಿತು.

ಆಕ್ಷೇಪಣೆಗಳನ್ನು ಸಮಗ್ರವಾಗಿ ಪರಿಗಣಿಸಿದ ನಂತರ ಶ್ರೀ ಕೆ.ಹೆಚ್. ಓಬಳಪ್ಪ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಳಗಾವಿರವರಿಗೆ ದಿನಾಂಕ : 01–01–2006 ರಂದಿನಂತಿನ ಸಹಾಯಕ ನಿರ್ದೇಶಕರ ವೃಂದದಲ್ಲಿನ ಜೇಷ್ಠತಾ ಕ್ರಮ ಸಂಖ್ಯೆ : 24 "ಎ" ಎಂದು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕಮಲಮ್ಮ.**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ.

P.R. 204

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 351 ಎಲ್‌ಆರ್‌ಎ 2012, ದಿನಾಂಕ : 5–2–2013**

ಶ್ರೀ 1008 ಮಹಾವೀರ ಜೈನ ಅಲ್ಪ ಸಂಖ್ಯಾತರ ಜೀರ್ಣೋದ್ದಾರ ಸಮಿತಿ, ಮೈಗೂರು ಇವರಿಗೆ ಜೈನ ಮಂದಿರ ಹಾಗೂ ಸಮೂದಾಯ ಭವನ ನಿರ್ಮಾಣಕ್ಕಾಗಿ ಜಮಖಂಡಿ ತಾಲ್ಲೂಕಿನ ಮೈಗೂರು ಗ್ರಾಮದ ರಿ.ಸ.ನಂ. 57/1ರಲ್ಲಿ ಕ್ಷೇತ್ರ 3.03 ಎ/ಗುಂ, 239/8/2ಎರಲ್ಲಿ 0.10 ಹಾಗೂ 134/1 ರಲ್ಲಿ 00.20 ಹೀಗೆ ಒಟ್ಟು 3.33 ಎ/ಗುಂ ಕೃಷಿ ಜಮೀನನ್ನು ಧಾರ್ಮಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು (1974)ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಕಲಂ 109 ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ

ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95 ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 205**

**ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ತುಮಕೂರು ವಿಭಾಗ, ತುಮಕೂರು**

**ನಂ. ಎ3(71(ಎ)/ಅಮೋ/ಸಿಆರ್.135/2008–09, ದಿನಾಂಕ : 18–12–2012**

**ಉಪಸ್ಥಿತರು : ಶ್ರೀ ಬಿ. ವೆಂಕಟೇಶ್, ಭಾ.ಆ.ಸೇ.**

**ಅಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು**

1. ಫಿರ್ಯಾದುದಾರರು : 1. ಶ್ರೀ ಎಂ. ಪ್ರಶಾಂತ್, ಪೋಲೀಸ್ ವೃತ್ತ ನಿರೀಕ್ಷಕರು, ಕಳ್ಳಂಬೆಳ್ಳ ಪೋಲೀಸ್ ಠಾಣೆ, ಕಳ್ಳಂಬೆಳ್ಳ, ಶಿರಾ ತಾಲ್ಲೂಕು.
   2. ಶ್ರೀ ಎಂ. ಚಿಕ್ಕರಂಗೇಗೌಡ, ಆರಕ್ಷಕ ಉಪ ನಿರೀಕ್ಷಕರು, ಕಳ್ಳಂಬೆಳ್ಳ ಪೋಲೀಸ್ ಠಾಣೆ, ಕಳ್ಳಂಬೆಳ್ಳ, ಶಿರಾ ತಾ॥
2. ಎದುರುದಾರರು : ಶ್ರೀ ಚಾಂದ್ ಪಾಷಾ ಬಿನ್ ಅಬ್ದುಲ್ ಖಾದರ್, ಮೆಕ್ಕಾ ರೈಸ್‌ಮಿಲ್, ಹಿಂಭಾಗ, ಶಿರಾ, ತುಮಕೂರು ಜಿಲ್ಲೆ.

**ಪ್ರಕರಣದ ಹಿನ್ನೆಲೆ :**

ದಿನಾಂಕ : 9–7–2008 ರಂದು ಶಿರಾ ತಾಲ್ಲೂಕು, ದೊಡ್ಡಗೊಳ ಗ್ರಾಮದ ಸ.ನಂ. 184/ಬಿ ಹಿಡುವಳಿ ಜಮೀನಿನ ಬಳಿ, ಪೊಲೀಸ್ ವೃತ್ತ ನಿರೀಕ್ಷಕರು, ಕಳ್ಳಂಬೆಳ್ಳ ಪೋಲೀಸ್ ಠಾಣೆ ಹಾಗೂ ಆರಕ್ಷಕ ಉಪ ನಿರೀಕ್ಷಕರು, ಕಳ್ಳಂಬೆಳ್ಳ ಪೋಲೀಸ್ ಠಾಣೆ ಇವರು ಇತರೆ ಸಿಬ್ಬಂದಿಗಳೊಡನೆ ದೊಡ್ಡಗೊಳ್ಳ ಗ್ರಾಮದ ಬಳಿ, ಮಧ್ಯಾಹ್ನ ಸುಮಾರು 3.30 ಗಂಟೆ ಸಮಯದಲ್ಲಿ ಠಾಣೆಗೆ ಬಂದ ಲಿಖಿತ ದೂರಿನ ಮೇರೆಗೆ ಕಳ್ಳಂಬೆಳ್ಳ ಪೋಲೀಸ್ ಠಾಣೆ ಮೊಕದ್ದಮೆ ಸಂಖ್ಯೆ : 135/2008ರಂತೆ ಪ್ರಕರಣ ದಾಖಲಿಸಿ ಕೃತ್ಯಕ್ಕೆ ಉಪಯೋಗಿಸಿದ ಮೋಟಾರ ಸೈಕಲ್ ಕೆ.ಎ.–06ಇಎ–3912 ನ್ನು ಶ್ರೀಮತಿ ಕಮಲಮ್ಮ ಕೋಂ ತಿಪ್ಪೇಸ್ವಾಮಿ ಇವರ ದೊಡ್ಡಗೊಳ ಗ್ರಾಮದ ಸ.ನಂ. 184/ಬಿ ಹಿಡುವಳಿ ಜಮೀನಿನಲ್ಲಿ ನೋಡಲಾಗಿ ಜಮೀನಿನಲ್ಲಿ 2 ಶ್ರೀಗಂಧದ ಮರಗಳನ್ನು ಕಡಿದು ತೆಗೆದುಕೊಂಡು ಹೋಗಿರುವುದು ಕಂಡು ಬಂದಿತು. ನಮ್ಮ ಸಿಬ್ಬಂದಿಗಳು ಸ್ಥಳವನ್ನು ಪರಿಶೀಲಿಸಿ ನೋಡಲಾಗಿ 2 ಶ್ರೀ ಗಂಧದ ಮರಗಳು ಹಾಗೂ ಒಂದು ರಿಲಿಯನ್ಸ್ ಮೊಬೈಲ್ ಹಾಗೂ 2 1/2 ಅಡಿ ಉದ್ದದ ಗರಗಸ ಕಂಡು ಬಂತು.

ಮೋಟಾರ್ ಬೈಕ್ ಸಂಖ್ಯೆ : ಕೆ 06–ಇಎ–3912 ಆಗಿದ್ದು ಸದರಿ ಅರಣ್ಯ ಮೊಕದ್ದಮೆಗೆ ಸಂಬಂಧಿಸಿದಂತೆ ದಿನಾಂಕ : 9–7–2008ರಂದೆ ಪ್ರಥಮ ಮಾಹಿತಿ ವರದಿ ದಾಖಲಿಸಿ ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 86 ಹಾಗೂ ಐ.ಪಿ.ಸಿ. ನಿಯಮ 1860 ಸೆಕ್ಷನ್ 379 ರಡಿ ಕೇಸು ದಾಖಲಿಸಿ ಸಂಬಂಧಿಸಿದ ಅಸಾಮಿಗಳನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿ ಮೋಟಾರ್ ಬೈಕ್, ವಶ ಪಡಿಸಿಕೊಂಡಿದ್ದ ಮುದ್ದೆ ಮಾಲು ಒಂದು ರಿಲಿಯಾನ್ಸ್ ಮೊಬೈಲ್ ಹಾಗೂ 2 1/2 ಅಡಿ ಉದ್ದದ 1 ಗರಗಸ ಸಮೇತ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ರವರ ಸಮಕ್ಷಮ ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯಾಧಿಕಾರಿ, ಶಿರಾ ವಲಯ ಇವರ ವಶಕ್ಕೆ ಒಪ್ಪಿಸಲಾಯಿತು.

ಪೊಲೀಸ್ ವೃತ್ತ ನಿರೀಕ್ಷಕರು, ಕಳ್ಳಂಬೆಳ್ಳ ಪೋಲೀಸ್ ಠಾಣೆ ಶಿರಾ ರವರು ಸಲ್ಲಿಸಿದ ಮೇಲ್ಕಂಡ ಅರಣ್ಯ ಅಪರಾಧ ಪ್ರಕರಣ ನಂ. 135/2008–09, ದಿನಾಂಕ : 9–7–2008 ರ ದಾಖಲೆಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು 71(ಎ) ರಡಿ ತನಿಖೆ ನಡೆಸಲು ಸದರಿ ವಾಹನ ನಂ. ಕೆಎ–06–ಇಎ 3912ರ ಮಾಲೀಕರ ವಿಳಾಸವನ್ನು ತಿಳಿಯುವ ಸಲುವಾಗಿ ಒದಗಿಸಿದ ಆರ್.ಸಿ. ಬುಕ್ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟ್‌ನ್ನು ಪರಿಶೀಲಿಸಿದ್ದು, ಸದರಿ ವಾಹನದ ಮಾಲೀಕರು ಶ್ರೀ ಚಾಂದಾ ಪಾಷ್ ಬಿನ್ ಲೇಟ್ ಅಬ್ದುಲ್ ಖಾದರ್ ಸಾಭ್, ಮೆಕ್ಕಾ ರೈಸ್ ಮಿಲ್ ಹಿಂಭಾಗ, ಶಿರಾ ತುಮಕೂರು ಜಿಲ್ಲೆ ಎಂದು ತಿಳಿದುಬಂದಿತು.

ಈ ಮಧ್ಯೆ ವಾಹನದ ಮಾಲೀಕರು ಸದರಿ ಮೋಟಾರ್ ಬೈಕ್ ನಂ. ಕೆ.ಎ06–ಇಎ–3912 ಅನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿ, ಈ ನ್ಯಾಯಾಲಯದಲ್ಲಿ ವಕಾಲತ್ತು ಸಲ್ಲಿಸಿರುತ್ತಾರೆ. ವಿಚಾರಣೆ ಬಗ್ಗೆ ದಿನಾಂಕ : 9–11–2010 ರಂದು, 23–11–2010 ರಂದು 23–11–2010 ರಂದು 14–12–2010 ರಂದು, 11–1–2011, 21–1–2011, 8–2–2011, 19–2–2011, 8–3–2011, 29–3–2011, 19–5–2012, 4–7–2012 ಹಾಗೂ 1–8–2012 ರಂದು, ವಾಹನ ಮಾಲೀಕರು ನೋಟೀಸ್ ಜಾರಿ ಮಾಡಿದ್ದು, 1–11–2010 ರಂದು ಹಾಗೂ 5–6–2012 ರಂದು ಮತ್ತು 11–7–2012 ರಂದು ನೋಟೀಸ್ ಪಡೆದಿದ್ದು, ಸ್ವೀಕೃತಿ ಪತ್ರ ಬಂದಿರುತ್ತದೆ. ಆದರೆ ವಿಚಾರಣೆಗೆ ದಿನಾಂಕ : 14–12–2010 ರಂದು ಮಾತ್ರ ವಾಹನ ಮಾಲೀಕರು ಹಾಜರಾಗಿರುತ್ತಾರೆ. ನಂತರ ವಾಹನದ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿರುವುದಿಲ್ಲ.

ಸದರಿ ಅರಣ್ಯ ಅಪರಾಧ ಪ್ರಕರಣಕ್ಕೆ ಸಂಬಂಧಿಸಿದಂತೆ ಪಿರ್ಯಾದುದಾರರಾದ ಪ್ರಾಸಿಕ್ಯೂಷನ್ನಿನ ಸಾಕ್ಷಿ 1) (ಪಿಡಬ್ಲ್ಯೂ–2) ಆದ ಶ್ರೀ ಎಂ. ಚಿಕ್ಕರಂಗೇಗೌಡ, ಆರಕ್ಷಕ ಉಪ ನಿರೀಕ್ಷಕರು, ಕಳ್ಳಂಬೆಳ್ಳ ಪೊಲೀಸ್ ಠಾಣೆ, ಶಿರಾ ತಾ॥ ರವರು ದಿನಾಂಕ : 8–3–2011 ರಂದು ಇಲಾಖೆ ಪರ ಸಾಕ್ಷಿಯನ್ನು ವಿಚಾರಣೆ ಮಾಡಲಾಗಿದೆ. ಹಾಗೂ 4 ನಿಶಾನೆಗಳನ್ನು ಗುರುತಿಸಲಾಗಿದೆ. ಮತ್ತು 2 ಮುದ್ದೇ ಮಾಲುಗಳನ್ನು ಗುರುತಿಸಲಾಗಿದೆ.

ಇಲಾಖೆ ಪರವಾಗಿ ADP ಯವರ ವಾದವನ್ನು ಆಲಿಸಲಾಗಿದೆ ಮತ್ತು ಮೋಟಾರ್ ಬೈಕ್ ಮಾಲೀಕರ ಪರವಾಗಿ ಅವರ ಪರ ವಕೀಲರಾಗಲೀ ಅಥವಾ ವಾಹನ ಮಾಲೀಕರಾಗಲೀ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಮತ್ತು ಪ್ರಕರಣದಲ್ಲಿ ಅಮಾನತ್ತಾಗಿರುವ ಮೋಟಾರ್ ಬೈಕನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಭಿಯೋಜನದ ಪರ ತಮ್ಮ ಪ್ರಕರಣವನ್ನು ರುಜುವಾತು ಪಡಿಸಿರುತ್ತಾರೆಯೇ ?

ಉತ್ತರ : ರುಜುವಾತು ಪಡಿಸಿರುತ್ತಾರೆ.

**ಆದೇಶಕ್ಕೆ ಕಾರಣಗಳು :**

ಮೇಲೆ ತಿಳಿಸಿರುವ ಪ್ರಕರಣದ ಸಂಕ್ಷಿಪ್ತ ವಿವರಗಳನ್ನು ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖೆಯ ಪರವಾಗಿ ಹಾಜರು ಪಡಿಸಲಾಗಿರುವ ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲೆಗಳು ಅಮಾನತ್ತಾದ ಮೋಟಾರ್ ಬೈಕನ್ನು ಮತ್ತು ಮುದ್ದೇ ಮಾಲುಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಮರ್ಥನೀಯವಾಗಿರುತ್ತದೆ.

1. ಅಭಿಯೋಜನದ ಪರ ವಿಚಾರಣೆಯಾದ ಪ್ರಾಸಿಕ್ಯೂಶನ್ 2ನೇ ಸಾಕ್ಷಿ ಶ್ರೀ ಎಂ. ಚಿಕ್ಕರಂಗೇಗೌಡ ಪಿ.ಎಸ್.ಐ. ಕಳ್ಳಂಬೆಳ್ಳ ಪೊಲೀಸ್ ಠಾಣೆ ಶಿರಾ ತಾಲ್ಲೂಕು ಇವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ ಲಿಖಿತ ದೂರುದಾರರಾಗಿದ್ದ ಹನುಮಂತರಾಯಪ್ಪ, ಕಳ್ಳಂಬೆಳ್ಳ ಹೋಬಳಿ ಕಡವಿಗೆರೆ ಗ್ರಾಮ ಶಿರಾ ತಾ॥ ಇವರ ದೂರಿನಂತೆ ದಿನಾಂಕ : 9–7–2008ರಂದು ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ಕಡಿದು ಸಾಗಿಸಲು ಉಪಯೋಗಿಸಿದ ವಾಹನವನ್ನು ಅಮಾನತ್ತು ಪಡಿಸುವ ಸಂದರ್ಭದಲ್ಲಿ ವಿಚಾರಿಸಿದಾಗ ಸದರಿ ಶ್ರೀಗಂಧದವನ್ನು ಕಡಿದು ಸಾಗಿಸಲು ಯಾವುದೇ ಪರವಾನಗಿ ಇರದೇ ಇದ್ದುದರಿಂದ ಮೋಟಾರ್ ಬೈಕನ್ನು, ವಾಹನ ಸಂಖ್ಯೆ : ಕೆಎ–06–ಇಎ 3912 ವಾಹನವನ್ನು ಮತ್ತು ಕಡಿದಿದ್ದ ಎರಡು ಶ್ರೀ ಗಂಧದ ಮರಗಳ ತುಂಡುಗಳನ್ನು ಅವುಗಳ ಉದ್ದ ಅಳತೆಗಳನ್ನು ಪಟ್ಟಿ ಮಾಡಿ ಅಲ್ಲಿದ್ದ 1 ರಿಲಿಯನ್ಸ್ ಮೊಬೈಲ್ ಮತ್ತು 2 1/2 ಅಡಿ ಉದ್ದದ ಸಾಮಿಲ್ ಬ್ಲೇಡ್ (ಗರಗಸ) ಅನ್ನು ಅಮಾನತ್ತು ಮಾಡಿಕೊಳ್ಳಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ ಮತ್ತು ವಾಹನ ರಹದಾರಿ ಇಲ್ಲದೆ 2 ಮರಗಳ 11 ಕೆ.ಜಿ. ಶ್ರೀ ಗಂಧದ ತುಂಡುಗಳನ್ನು ಕಡಿದು ಸಾಗಿಸಲು ಉಪಯೋಗಿಸಿದ ಮೋಟಾರ್ ಬೈಕ್ ವಾಹನವನ್ನು ಮಹಜರ್ ಮೂಲಕ ಅಮಾನತ್ತು ಮಾಡಿಕೊಳ್ಳಲಾಗಿದೆ. ಮತ್ತು ಪಿರ್ಯಾದಿನ ಪ್ರತಿಯನ್ನು ನಿಶಾನೆ ಪಿ1 ಎಂದು ಎಫ್ಐಆರ್‌ನ್ನು ನಿಶಾನೆ 2 ಎಂದು ಸಾಮಿಲ್ ಬ್ಲೇಡ್ (ಗರಗಸ) ಮತ್ತು ಮೊಬೈಲ್‌ಗಳನ್ನು ಹಾಗೂ ಮೋಟಾರ್ ಬೈಕ್ ಅನ್ನು ಎಂ–1 ಎಂದು ಗುರುತಿಸಲಾಗಿದೆ. ವಿಚಾರಣೆ ಕಾಲದಲ್ಲಿ ಹಾಜರುಪಡಿಸಿರುವ ಸಾಕ್ಷಾಧಾರಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಕರ್ನಾಟಕ ಅರಣ್ಯ ಕಾಯ್ದೆ ಅನ್ವಯ ಪರಿಗಣಿಸಿದಲ್ಲಿ ಯಾವುದೇ ರಹದಾರಿ ಇಲ್ಲದೇ, 11 ಕೆ.ಜಿ.ಯ ಎರಡು ಶ್ರೀಗಂಧದ ತುಂಡುಗಳನ್ನು ಕಡಿದು ಸಾಗಿಸುತ್ತಿದ್ದ ಬಗ್ಗೆ ಸ್ಪಷ್ಟವಾದ ಸಾಕ್ಷಾಧಾರಗಳು ಕಂಡುಬರುತ್ತದೆ.

   ವಾಹನ ಮಾಲೀಕರ ಪರವಾಗಿ ವಕೀಲರಾಗಲಿ ಅಥವಾ ಮಾಲೀಕರಾಗಲೀ ಯಾರೂ ಸಹ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಅವರು ತೆಗೆದುಕೊಂಡ ನಿಲುವು ಮತ್ತು ವಿಚಾರಣೆಯಲ್ಲಿನ ಅಂಶಗಳನ್ನು ಅಭಿಯೋಜನದ ಪರವಾಗಿ ಮಾಡಲಾಗಿರುವ ಸಾಕ್ಷಧಾರಗಳನ್ನು ನಂಬದೆ ಇರಲು ಕಾರಣಗಳಾಗಲಾರವು, ಕಲಂ 80 ಅರಣ್ಯ ಕಾಯ್ದೆ ಅಡಿಯಲ್ಲಿ ತಿಳಿಸಲಾಗಿರುವ ಪೂರ್ವ (ಗ್ರಹಿಕೆ (Presumtion) ಪ್ರಕಾರ ಎಲ್ಲಾ ಅರಣ್ಯ ವಸ್ತುಗಳು ಸರ್ಕಾರದ ಆಸ್ತಿಯಾಗಿರುತ್ತವೆ. ಅದಕ್ಕೆ ವಿರುದ್ಧವಾದ ಅಂಶಗಳನ್ನು ರುಜುವಾತು ಪಡಿಸುವವರೆಗೂ ಆ ವಸ್ತುಗಳು ಸರ್ಕಾರದ ಆಸ್ತಿಯೆಂದು ಗ್ರಹಿಸಬೇಕಾಗಿರುತ್ತದೆ. ಅದಕ್ಕೆ ವಿರುದ್ಧವಾದ ಅಂಶಗಳನ್ನು ರುಜುವಾತು ಪಡಿಸುವುದು ಆರೋಪಿಯ ಜವಾಬ್ದಾರಿಯಾಗಿರುತ್ತದೆ. ಈ ಪ್ರಕರಣದಲ್ಲಿ ವಾಹನದ ಮಾಲೀಕರು ಹಾಜರಾಗಿ ಅಂತಹ ಯಾವುದೇ ಅಂಶವನ್ನು ರುಜುವಾತು ಪಡಿಸಿರುವುದಿಲ್ಲ ಮತ್ತು ಸದರಿ ವಸ್ತುಗಳನ್ನು ಕ್ರಮಬದ್ಧವಾದ ರಹದಾರಿಯ ಮೂಲಕ ಸಾಗಿಸಲಾಗುತ್ತಿತ್ತು. ಎನ್ನುವುದನ್ನು ರುಜುವಾತು ಪಡಿಸುವುದು ಆರೋಪಿಯ ಅಥವಾ ವಾಹನ ಮಾಲೀಕರ ಜವಾಬ್ದಾರಿಯಾಗಿರುತ್ತದೆ.

   ಈ ಬಗ್ಗೆ ಕರ್ನಾಟಕ ಉಚ್ಚನ್ಯಾಯಾಲಯವು 1989 (1) Kar L.J. 454 ILR–1989 Kar Page No. 687 ರಲ್ಲಿ ಆಯಾಜ್ ಅಹ್ಮದ್ V/s State of Karnataka ಉಲ್ಲೇಖಿತ ತೀರ್ಪಿನಲ್ಲಿ ತಿಳಿಸಿರುವಂತೆ ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಯಾವುದೇ ಅರಣ್ಯ ವಸ್ತುಗಳನ್ನು ಸಾಗಿಸದಂತೆ ಮುಂಜಾಗ್ರತೆ ತೆಗೆದುಕೊಂಡಿರುವ ಬಗ್ಗೆ ಮತ್ತು ಸದರಿಯವರು ಅಂತಹ ಪ್ರಕರಣದ ಬಗ್ಗೆ ತನಗೆ ಮಾಹಿತಿ ಇರಲಿಲ್ಲ ಮತ್ತು ತಾನು ಅದರಲ್ಲಿ ಯಾವುದೇ ಬಾಗಿ ಅಲ್ಲ ಎನ್ನುವುದನ್ನು ರುಜುವಾತು ಪಡಿಸುವ ಜವಾಬ್ದಾರಿ ಅವರ ಮೇಲಿರುತ್ತದೆ ಸದರಿ ವಾಹನವು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಕಾರಣ ಇಲ್ಲ ಎನ್ನುವುದನ್ನು ವಾಹನ ಮಾಲೀಕರು ಹಾಜರಾಗಿ ತೋರಿಸಿರುವುದಿಲ್ಲ ಮತ್ತು ರುಜುವಾತು ಪಡಿಸಿಲ್ಲ.

   ಮೇಲೆ ಹೇಳಿದ ಉಲ್ಲೇಖಿತ ತೀರ್ಪಿನಲ್ಲಿ ಅವಲೋಕಿಸಿರುವ ಅಂಶವನ್ನು ಕರ್ನಾಟಕ ಉಚ್ಚನ್ಯಾಯಾಲಯವು ಈ ಹಿಂದೆ ಪ್ರಕಟಿಸಲಾದ ತೀರ್ಪು ರಮೇಶ್ ದೀಕ್ಷತ್ V/S State of Karnataka 1987 (2) kar. LJ, SHN, 278 Page no. & ILR 1985 Kar 2571 ತೀರ್ಪಿನಲ್ಲಿಯೂ ಸಹ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ. ಈ ಅಭಿಪ್ರಾಯದ ಅನುಗುಣವಾಗಿ ವಾಹನದ ಮಾಲೀಕರು ವಿಚಾರಣಾ ಕಾಲದಲ್ಲಿ ಹಾಜರಾಗಿ ತಮ್ಮ

ವಾಹನವು ಅಂತಹ ಕೃತ್ಯಗಳಲ್ಲಿ ಭಾಗವಹಿಸಿರುವುದಿಲ್ಲ ಎಂದು ರುಜುವಾತು ಪಡಿಸಿರುವುದಿಲ್ಲ. ಅಭಿಯೋಜನದ ಪರವಾಗಿ ಸಾಕ್ಷಿದಾರರಿಗೆ ಮಾಡಲಾಗಿರುವ ವಿಚಾರಣೆಯಲ್ಲಿ ಅಂತಹ ಯಾವುದೇ ಅಂಶಗಳಾಗಲೀ, ಪ್ರಯತ್ನಗಳಾಗಲೀ ಕಂಡು ಬಂದಿರುವುದಿಲ್ಲ. ಅಭಿಯೋಜನದ ಪರ ವಿಚಾರಿಸಲಾದ ಸಾಕ್ಷಿದಾರರ ಹೇಳಿಕೆಗಳಿಂದ ವಾಹನವು ಯಾವುದೇ ರಹದಾರಿ ಇಲ್ಲದೆ 11 ಕೆ.ಜಿ.ಯ 2 ಶ್ರೀಗಂಧದ ತುಂಡುಗಳನ್ನು ಕಡಿದು ನಾಟಾಗಳನ್ನು ಸಾಗಿಸಲಾಗುತ್ತಿತ್ತು ಎನ್ನುವ ಬಗ್ಗೆ ಸ್ಪಷ್ಟವಾಗಿ ರುಜುವಾತು ಪಡಿಸುತ್ತವೆ ಆದ್ದರಿಂದ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ಹೇಳಿದ ಕಾರಣಗಳಿಗೋಸ್ಕರ ಮತ್ತು ವಸ್ತುಸ್ಥಿತಿ ಹಾಗೂ ದಾಖಲೆಗಳನ್ನು ಆಧರಿಸಿ ಶ್ರೀ ಬಿ. ವೆಂಕಟೇಶ್, ಭಾ.ಅ.ಸೇ. ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 71 (ಎ) 2 ರಿಂದ 7(ಜಿ) ಪ್ರಕಾರ ಅಪರಾಧ ಸಂಖ್ಯೆ : ಎ3 : 71 (ಎ) ಅ.ಮೊ. ಸಿಆರ್/135/2008–09ರಲ್ಲಿ ಬಾಗಿಯಾಗಿದ್ದ ಮೋಟಾರ್ ಬೈಕ್ ವಾಹನ ಸಂಖ್ಯೆ: ಕೆಎ–06–ಇಎ–3912 ಮತ್ತು ಶ್ರೀಗಂಧದ 2 ತುಂಡುಗಳನ್ನು (11 ಕೆ.ಜಿ.) ಹಾಗೂ ಒಂದು ಸಾಮಿಲ್ ಬ್ಲೇಡ್ (ಗರಗಸ) ಹಾಗೂ ಒಂದು ಮೊಬೈಲ್ ಸೆಟ್‌ನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಲಾಗಿದೆ.

ಈ ವಾಹನವು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿದೆ ಎಂದು ಸದರಿ ಆದೇಶವನ್ನು ನನ್ನ ಉಕ್ತ ಲೇಖನದಂತೆ ಬೆರಳಚ್ಚುಗಾರರು ಸಿದ್ದ ಪಡಿಸಿದ ನಂತರ ಪರಿಶೀಲನೆ ಮಾಡಿ ನ್ಯಾಯಾಲಯದಲ್ಲಿ ಈ ದಿನ ಅಂದರೆ ದಿನಾಂಕ : 18–12–2012 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಆದೇಶ ಹೊರಡಿಸಲಾಗಿದೆ. ಈ ಆದೇಶ ಹೊರಡಿಸಿದ 30 ದಿನಗಳೊಳಗೆ ಯಾವುದೇ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಈ ಆದೇಶವನ್ನೇ ಅಂತಿಮ ಆದೇಶ ಎಂದು ಪರಿಗಣಿಸಲಾಗುವುದು.

**ಉಪ ಅರಣ್ಯ ಸಂರಕ್ಷಣಾಧಿಕಾರಿ,**
ತುಮಕೂರು ವಿಭಾಗ, ತುಮಕೂರು

**P.R. 207**

## ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18.

**ದಾವಾ ಸಂಖ್ಯೆ : ಜೆಆರ್‌ಬಿ/ಡಿಐಎಸ್/498/1996–97.**

| ವಾದಿ | | ಪ್ರತಿವಾದಿ |
|---|---|---|
| ವ್ಯವಸ್ಥಾಪಕ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು–560 018.<br>ಪರ ವಕೀಲರು :<br>ವಿ.ಎಫ್. ಕುಮಾರ್ | ವಿರುದ್ಧ | 1. ಕಾರ್ಯದರ್ಶಿ, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>2. ಶ್ರೀ ಶ್ರೀನಿವಾಸ, ಮೇಜರ್, ಅಧ್ಯಕ್ಷರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>3. ಶ್ರೀ ಜಿ. ಪ್ರಶಾಂತ, ಮೇಜರ್, ಕಾರ್ಯದರ್ಶಿ, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>4. ಶ್ರೀ ಕೆ. ಮುತ್ತುರಾಜ್, ಮೇಜರ್ ಉಪಾಧ್ಯಕ್ಷರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>5. ಶ್ರೀ ಆರ್. ಕುಮಾರ್, ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>6. ಶ್ರೀ ಬಿ.ವಿ. ಪ್ರವೀಣ್ ಕುಮಾರ್, ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21<br>7. ಶ್ರೀ ಟಿ.ಎಂ. ನಾಗರಾಜ್, ಮೇಜರ್ ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21 |

8. ಶ್ರೀ ಹೆಚ್.ಆರ್. ಸುರೇಶ್, ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

9. ಶ್ರೀ ಪಿ.ಎಸ್. ಹರಿಯಣ್ಣ ಗೌಡ, ಮೇಜರ್ ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

10. ಶ್ರೀ ಪಿ.ಎಸ್. ಪಾಪಣ್ಣ ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

11. ಶ್ರೀಮತಿ ಟಿ.ಎಸ್. ಯಶೋಧ, ಮೇಜರ್ ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

12. ಶ್ರೀ ವಿ. ಆನಂದ, ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

13. ಶ್ರೀ ಸೋಮಸುಂದರ, ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

14. ಶ್ರೀ ಹೆಚ್.ಬಿ. ಉಮೇಶ್, (ಮೃತ) ಅವರ ವಾರಸುದಾರರು,

14. 1ಎ. ಶ್ರೀಮತಿ ಹೆಚ್.ಎಸ್. ಹರಿಣಿ, ಕೋಂ: ಲೇಟ್ ಹೆಚ್.ಬಿ. ಉಮೇಶ್,

1ಬಿ. ಶ್ರೀ ಕೀರ್ತಿ ಕಂದಾ, ಬಿನ್ : ಲೇಟ್ : ಹೆಚ್.ಬಿ. ಉಮೇಶ್,

1ಸಿ. ಶ್ರೀ ಚರಣ್, ಬಿನ್ : ಲೇಟ್ : ಹೆಚ್.ಬಿ. ಉಮೇಶ್

ವಿಳಾಸ : ನಂ. 112, ಐ.ಸಿ.ಎಸ್.ಸಿ. ಮೇನ್ ರೋಡ್, ನಾಗರಭಾವಿ, ಬೆಂಗಳೂರು–72

15. ಶ್ರೀ ನಾರಾಯಣ ಗೌಡ, ಮೇಜರ್, ಬಿನ್ ಪುಟ್ಟೇಗೌಡ, ಮಾಜಿ ಅಧ್ಯಕ್ಷರು ಹಾಗೂ ಈಗಿನ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ.,

ಕೆರೆಲಾಲುಸಂದ್ರ, ಮಳಗಳು ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ.

16. ಶ್ರೀ ಎಸ್.ಜಿ. ಚೆಲುವಯ್ಯ, ಮೇಜರ್, ಮಾಜಿ ಉಪಾಧ್ಯಕ್ಷರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೆಕೊಪ್ಪ, ಸೊಂಡೆಕೊಪ್ಪ ಪೋಸ್ಟ್, ನೆಲಮಂಗಲ ತಾ: ಬೆಂಗಳೂರು (ಗ್ರಾ) ಜಿಲ್ಲೆ.

17. ಶ್ರೀ ವಿ. ಚನ್ನಪ್ಪ, ಮೇಜರ್, ಮಾಜಿ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನೆರಳಘಟ್ಟ, ಅಣಬೆ ಪೋಸ್ಟ್, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

| | | |
|---|---|---|
| | | 18. ಶ್ರೀ ಎ. ನರಸಿಂಹಯ್ಯ, ಮೇಜರ್ ಮಾಜಿ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಗಂಟಿಗಾನಹಳ್ಳಿ ಪೋಸ್ಟ್, ಕುರುವೇಗೆರೆ, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ. |
| | | 19. ಶ್ರೀ ಎನ್.ಎಸ್. ನರಸೇಗೌಡ, ಮೇಜರ್ ಮಾಜಿ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನಂ. 692, 'ಎ' 8ನೇ ಮೇನ್, 3ನೇ ಸ್ಟೇಜ್, 3ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು–79. |
| | | 20. ಶ್ರೀ ಬಿ. ರಾಮಿ ರೆಡ್ಡಿ, ಮೇಜರ್, ಮಾಜಿ ವ್ಯವಸ್ಥಾಪಕ ನಿರ್ದೇಶಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನಂ. 124, 'ಎ' ಫ್ಲೋರ್, 26ನೇ ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20. |
| | | 21. ಶ್ರೀ ಕೆ.ಟಿ. ವೆಂಕಟಸ್ವಾಮಿ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು (ನಿವೃತ್ತ) ಕೇಂದ್ರ ಕಛೇರಿ ಶಾಖೆ, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನಂ. 1013 ಇ. ಮೂಕಾಂಬಿಕ ಎ.ಆರ್. ಅವೆನ್ಯೂ, ನ್ಯೂ ತಿಪ್ಪಸಂದ್ರ, ಬೆಂಗಳೂರು–75. |
| | | 22. ಶ್ರೀ ಎಂ. ಹೊನ್ನಲಿಂಗೇಗೌಡ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ, ನಂ. 464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. |
| | | 23. ಶ್ರೀ ರಾಮಾಂಜನಪ್ಪ, ಮೇಜರ್, ಶಾಖಾ ಸೂಪರ್ ವೈಸರ್, (ಅಂಡರ್ ಸಸ್‌ಪೆನ್‌ಷನ್) ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ, ನಂ. 464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. |
| | | 24. ಶ್ರೀ ರಾಮಕೃಷ್ಣ, ಮೇಜರ್, ಶಾಖಾ ವ್ಯವಸ್ಥಾಪಕರು, (ಅಂಡರ್ ಸಸ್‌ಲೆನ್‌ಷನ್) ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ ಮತ್ತು ಡೆವಲಪ್‌ಮೆಂಟ್ ಶಾಖೆ) ನಂ. 221, 5ನೇ ಕ್ರಾಸ್, 1ನೇ ಮೇನ್, 1ನೇ ಹಂತ, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ, ಬೆಂಗಳೂರು–79. |
| | | 25. ಶ್ರೀ ರಂಗರಾಜು, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ. 466, 8ನೇ ಕ್ರಾಸ್, ಮಹಾಲಕ್ಷ್ಮೀ ಲೇಔಟ್, ಬೆಂಗಳೂರು–86. |
| | | 26. ಶ್ರೀ ಎ.ಸಿ. ಲಕ್ಷ್ಮೀಕಾಂತ, ಕ್ಯಾಶಿಯರ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ. 96, ಕಿರಣ್ ನಿಲಯ, 3ನೇ ಮೇನ್ ರೋಡ್, ಸರಸ್ವತಿ ಪುರ ನಂದಿನಿ ಲೇಔಟ್, ಬೆಂಗಳೂರು–96. |
| | | 27. ಶ್ರೀ ಹೆಚ್.ಎಲ್. ಶಿವಕುಮಾರ್, ಬಿನ್ ಲಕ್ಷ್ಮಣಗೌಡ, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಕೇಂದ್ರ ಕಛೇರಿ, ನಂ. 32, 3ನೇ ಕ್ರಾಸ್, ವಿಠಲ್‌ನಗರ, ಚಾಮರಾಜಪೇಟೆ, ಬೆಂಗಳೂರು–18. |
| | | 28. ಶ್ರೀ ಬಿ.ಎಸ್. ಅನಂತಮೂರ್ತಿ, ಪ್ರೋ : ಶ್ರೀ ಲಕ್ಷ್ಮೀ ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಶ್ರೀರಾಮಪುರಂ, ಬೆಂಗಳೂರು. |
| | | 29. ಶ್ರೀ ಬಿ.ಎಸ್. ವೆಂಕಟೇಶ್, ನಂ. 45/1, 11ನೇ ಕ್ರಾಸ್, 7ನೇ ಮೇನ್, ಶ್ರೀರಾಮಪುರಂ, ಬೆಂಗಳೂರು. |

| | | |
|---|---|---|
| | | 30. ಶ್ರೀ ಎಸ್.ಜಿ. ಗುಪ್ತಾ, ಕೇ: ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ. 31/2, 1ನೇ ಮುಖ್ಯ ರಸ್ತೆ, 6ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು-21 |

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ಸಲುವಾಗಿ 19ನೇ ಪ್ರತಿವಾದಿಗೆ ತಿಳುವಳಿಕೆ ನೋಟೀಸು"**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 30ನೇ ಪ್ರತಿವಾದಿಗಳಿಂದ ರೂ. 4,36,78.537/- (ರೂ. ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳು ಹಾಗೂ ಈ ಮೊತ್ತಕ್ಕೆ ದಿನಾಂಕ : 24-5-1996 ರಿಂದ ಸಾಲಿಯಾನ ಶೇ 22% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು, ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣದ ವಿಚಾರಣಾ ಹಂತದಲ್ಲಿರುವಾಗ ವಾದಿಯು ದಿನಾಂಕ: 3-12-2012 ರಂದು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಎನ್. ಸ್ಮಿತ ಕೋಂ. ಆರ್.ಎಸ್.ಆರ್. ವಿಜಯಕಾರ್ತಿಕ್ ರವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಅರ್ಜಿದಾರರು ಕಲಂ 103 ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 1ನೇ ಪ್ರತಿವಾದಿ ಸಂಘದ ಆಡಳಿತ ಮಂಡಳಿಯನ್ನು ಸಹಕಾರ ಇಲಾಖೆಯು 1994ನೇ ಸಾಲಿನಲ್ಲಿ ರದ್ದು ಮಾಡಿರುತ್ತದೆ. ಈ ಆದೇಶವನ್ನು 1ನೇ ಪ್ರತಿವಾದಿ ಸಂಘವು ಗೌರವ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ರಿಟ್ ಅಫೀಲು ಸಂ. 2218 ಮತ್ತು 2219 ಅ/ಫ/1991 ಹಾಗೂ 1992/1994 ಈ ರಿಟ್ ಅಫಿಲಿನನ್ವಯ ಗೌರವ ನ್ಯಾಯಾಲಯವು ಪ್ರತಿವಾದಿ 15 ರಿಂದ 19 ರವರುಗಳನ್ನು Government Nominees as Ad-Hoc Committee members to from bank administration till holding of new election on 2-12-1994 ಅದರನ್ವಯ ಸದರಿ ಅಡಾಕ್ ಕಮಿಟಿಯು ದಿನಾಂಕ : 13-5-1994 ರವರೆಗೆ ಕಾರ್ಯನಿರ್ವಹಿಸಿರುತ್ತದೆ. ಈ ಅವಧಿಯಲ್ಲಿ 19ನೇ ಪ್ರತಿವಾದಿಯು ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ಈ ಅವಧಿಯಲ್ಲಿ ಸಾಲಗಳನ್ನು ಮಂಜೂರು ಮಾಡಿರುತ್ತಾರೆ. ಆದರೆ ಅಡಾಕ್ ಕಮಿಟಿಯು ವಾದಿ ಸಂಘದಲ್ಲಿ ರೂ. 4,00,00,000/-ಕ್ಕೆ ದಿನಾಂಕ : 15-4-1995 ರಂದು ಅರ್ಜಿ ಸಲ್ಲಿಸಿ ಸಾಲವನ್ನು ಪಡೆದಿರುತ್ತಾರೆ. ಆದರೆ ಈ ಸಾಲ ಮಂಜೂರಾತಿಯಲ್ಲಿ ಅಡಾಕ್ ಕಮಿಟಿಯು ಗೌರವ ಉಚ್ಚ ನ್ಯಾಯಾಲಯದ ಆದೇಶ ಸಂಘದ ಬೈಲಾ ಮತ್ತು ಸಾಲಗಳ ನಿಯಮ ಮತ್ತು ನಿಬಂಧನೆಗಳ ಉಲ್ಲಂಘನೆ ಮಾಡಿ, ಅರ್ಜಿದಾರ ಬ್ಯಾಂಕಿಗೆ ಸುಳ್ಳು ಮಾಹಿತಿ ನೀಡಿ ಮೋಸ ಮಾಡಿರುತ್ತಾರೆ. ಆದರೆ ಪ್ರಸ್ತುತ 1ನೇ ಪ್ರತಿವಾದಿ ಸಂಘವು ತನ್ನ ಕಾರ್ಯಚಟುವಟಿಕೆ ನಡೆಸದೇ ಇರುವಂತಹ ಸ್ಥಿತಿಯನ್ನು ತಲುಪಿರುತ್ತದೆ. ಮುಂದೆಯು ಸಹ ಕಾರ್ಯಚಟುವಟಿಕೆಗಳನ್ನು ನಡೆಸುವ ಸಾಧ್ಯತೆ ಇಲ್ಲವೆಂದು ಮನಗಂಡು ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಲಾಗಿದೆ. ಈ ಎಲ್ಲಾ ಅವ್ಯವಹಾರಕ್ಕೆ ಅಡಾಕ್ ಕಮಿಟಿಯ ಸದಸ್ಯರು ಮತ್ತು ಬ್ಯಾಂಕಿನ ನೌಕರರು ಒಳಗೂಡಿ ವೈಯುಕ್ತಿಕಗಾಗಿ ಮತ್ತು ಜಂಟಿಯಾಗಿ ಅವ್ಯವಹಾರ ನಡೆಸಿ ಅರ್ಜಿದಾರ ಬ್ಯಾಂಕಿನ ಸಾಲದ ಮೊತ್ತವನ್ನು ಉಪಯೋಗಿಸಿಕೊಂಡು ನಂತರ ಬ್ಯಾಂಕಿಗೆ ನಷ್ಟ ಉಂಟಾಗಲು ಕಾರಣಕರ್ತರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ದಾವೆಗಳನ್ನು ಹೂಡಲಾಗಿದೆ. ಆದರೆ ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು. ಈ ಮಧ್ಯ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಎನ್. ಸ್ಮಿತ ಕೋಂ ಆರ್.ಎಸ್.ಆರ್. ವಿಜಯ ಕಾರ್ತಿಕ್ ರವರಿಗೆ ಸೇರಿದ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

3. ವಾದಿಯು ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಸ್ಥಿರಾಸ್ತಿಗಳ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಸ್ಥಿರಾಸಿಯು 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಎನ್. ಸ್ಮಿತ್ ಕೋಂ ಆರ್.ಎಸ್.ಆರ್. ವಿಜಯ ಕಾರ್ತಿಕ್ ರವರ ಹೆಸರಿಗೆ ಇರುವುದು ಕಂಡು ಬಂದಿರುತ್ತದೆ. ಈ ಸಂಬಂಧವಾಗಿ ವಾದಿಯು ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ ತಿಳಿಸಲಾಗಿರುವ ಅಂಶಗಳನ್ನು ಪರಿಶೀಲಿಸಲಾಗಿ 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಎನ್. ಸ್ಮಿತ ಕೋಂ. ಆರ್.ಎಸ್.ಆರ್. ವಿಜಯ ಕಾರ್ತಿಕ್ ರವರಿಗೆ 19ನೇ ಪ್ರತಿವಾದಿಯು Gift Deed ಮಾಡಿರುವುದು ವಾದಿ ಹಾಜರುಪಡಿಸಿರುವ ದಾಖಲಾತಿಗಳಿಂದ ಕಂಡುಬಂದಿರುವ ಹಿನ್ನೆಲೆಯಲ್ಲಿ ಅರ್ಜಿದಾರರು ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಿ 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಸ್ಮಿತ, ಕೋಂ ಆರ್.ಎಸ್.ಆರ್. ವಿಜಯ ಕಾರ್ತಿಕ್ ರವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಕಲಂ 103 ರಡಿ ಜಪ್ತಿ ಮಾಡುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯ ಪಡುತ್ತಾ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ. ಸಿಓ/139/ಸಿಎಂಎಲ್/2010 ದಿನಾಂಕ : 17-2-2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಭೀಮಸೇನ ಬಂಕದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 19ನೇ ಪ್ರತಿವಾದಿ ಮಗಳಾದ ಶ್ರೀಮತಿ ಎನ್. ಸ್ಮಿತ ಕೋಂ. ಆರ್.ಎಸ್.ಆರ್. ವಿಜಯ ಕಾರ್ತಿಕ್ ರವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ಈ ಪ್ರಕರಣದ ಅಂತಿಮ ತೀರ್ಪಿಗೆ ಜಪ್ತಿ ಪೂರ್ವ ಆದೇಶ ಹೊರಡಿಸಿರುತ್ತೇನೆ.

19ನೇ ಪ್ರತಿವಾದಿಗಳು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ ಯಾವುದೇ ಸ್ಥಿರಾಸ್ತಿಯನ್ನು/ಸ್ಥಿರಾಸ್ತಿಯ ಭಾಗವನ್ನು ಈ ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಛಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಂ ಮಾಡಿರುವ ಮೊತ್ತ ರೂ. 4,36,78,537/– (ರೂ. ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸದೊಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ರಸೀದಿಯನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ 19ನೇ ಪ್ರತಿವಾದಿಯು ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿನಸಗಳೊಳಗಾಗಿ ಅವಶ್ಯಕವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಜಪ್ತಿ ಪೂರ್ವ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಜಪ್ತಿ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

All that piece and parcel of the agriculture property bearing Sy. No. 86/1, measuring 2 Acres 38 Guntas. Sy No. 87/3 measuring 1 Acres 20 Guntas and Sy. No. 87/2 measuring 1 Acres 29 Guntas. in total 6 Acres 07 Guntas sitmated at Naranahalli Village, C.S. Pura Hobli, Gubbi Taluk, Tumkur District and commonly Bounded as per registered Gift deed.

| | |
|---|---|
| East by : | Property belongs Shubha N. |
| West by : | Hemavathi Kaluve |
| North by : | Property belongs to siddegowda and Gangarevemma |
| South by : | Property belongs to Ramaiah. |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದೆ ದಿನಾಂಕ: 25–2–2013 ರಂದು ಹೊರಡಿಸಿರುತ್ತೇನೆ.

**ಭೀಮಸೇನ ಬಂಕದ**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**P.R. 208**